F

ಕರ್ಣಾಟಕ

# ರಾಮಾಯಣ ಸಂಗ್ರಹದ

ಅರಣ್ಯಕಾಂಡವು

ಶ್ರೀರಸ್ತು

ಅರಮನೆ ಮುಜರಾಯಿ ಭಕ್ಷೀರು

ಹೆಚ್. ಲಿಂಗರಾಜೇಅರಸಿನವರಿಂದ

ನೂತನವಾಗಿ ರಚಿಸಲ್ಪಟ್ಟ

ಕರ್ಣಾಟಕ

# ರಾಮಾಯಣ ಸಂಗ್ರಹದ

ಅ ರ ಣ್ಯ ಕಾ ಂ ಡ ವು

---

ಮೈಸೂರು

ಆಸ್ಥಾನ ಮಹಾವಿದ್ವಾನ್

ಪಿ. ಆರ್. ಕರಿಬಸವಶಾಸ್ತ್ರಿಗಳಿಂದ

ಪರಿಶೋಧಿಸಲ್ಪಟ್ಟು

---

ಮೈಸೂರು:

ಶ್ರೀನಿವಾಸ ಮುದ್ರಾಶಾಲೆಯಲ್ಲಿ ಮುದ್ರಿಸಲ್ಪಟ್ಟಿತು

1917





ಓಂ

ಶ್ರೀಗುರುದಕ್ಷಿಣಾಮೂರ್ತಯೇ ನಮಃ.

ಕನ್ನಡ

# ರಾಮಾಯಣ ಸಂಗ್ರಹವು.

## ಅರಣ್ಯಕಾಂಡವು.

ಷಟ್ಪ|| ತೆರಳುವೆಡೆಯೊಳಗರಿವಿರಾಧನ |
ತರಿದುನೇಃಪದೊಳಾಜಟಾಯುವ |
ಜಿದು ರಾಮನು ಪಂಚವಟಿಯನು ಸಾರ್ದನೊಲವಿನಲಿ ||

ತೆರಳಿದರು ವರಚಿತ್ರಕೂಟದ |
ಮಿನಾ ರಾಘುವರು ಜತೆಯಲಿ |
ಜಾತೆಯುಮೈದೆ ಮೆರೆವಾ ದಂಡಕಾವನಕೆ ||
ರಿಯು ತರು ಗುಲ್ಮಲತೆಗಳ |
ಯಿಂ ನಾನಾ ವಿನೋದದೆ |
ತಿಹ ಮೃಗಪಕ್ಷಿ ನಿಕರದಿನೆಸೆದುದಾಬನವು ||೧||

ಅಂದು ಭಗವನ್ನಾಮ ಕೀರ್ತನ ।
ದಿಂದ ಕಾಲವ ಕಳೆವ ಮುನಿಜನ ।
ವೃಂದ ಕಂಡುದು ಬಂದುದಿವರಾರೆನುತ ಮುಸುಕಿದುದು ॥
ಸುಂದರಾಂಗರ ನೋಡೆ ಬಾಹುಜ ।
ರಂದದಿಂ ತೋರುವರು ಕೇಳುವೆ ।
ವೆಂದು ಕೈಗಳಮುಗಿದು ನುಡಿಸಿದರಂದು ರಾಘವನ ॥ ೨॥

ರಾಯ ನೀನಾರಡವಿಪರಿಯಂ ।
ತಾಯಸವು ನಿನಗೇಕೆ ತಾನೀ ।
ತೋಯಜಾಕ್ಷಿಯದಾರು ನಿನಗೀ ಸುಮುಖನೇನಹನು ॥
ಆಯಿತಿಲ್ಲಿಗೆ ಬರವದೇಕಿದ ।
ರಾಯತವ ನಮಗರುಹಬೇಕೆನು ।
ತಾ ಯಮೀಂದ್ರರು ನುಡಿಸಲೆಂದನು ರಾಮನನುನಯದೆ ॥ ೩॥

ಕೇಳಿರೈ ಋಷಿಗಳಿರ ನೃಪಜನ ।
ಪಾಳಿ ದಶರಥನೆನ್ನ ಜನಕನು ।
ತಾಳಿಹೆನು ನೇಮವನು ಪದಿನಾಲ್ಕಬುದ ಮಡವಿಯಲಿ ॥
ಕಾಲ ಕಳೆಯುವೆನೆನುತ ತನಗೀ ।
ಲೋಲಲೋಚನೆಯರಸಿತಾನತಿ ।
ಶೀಲವತಿಯೆನ್ನೊಡನೆ ಬಂದಳು ಯುವತಿ ವಿಮಲಮತಿ ॥ ೪॥

ರಾಮನೆಂದಪರೆನ್ನನೀತಂ ।
ಪ್ರೇಮಸೋದರ ಲಕ್ಷ್ಮಣನು ಮೇ ।
ಸ್ವಾಮಿನಿಯುನೀಕೆಯನು ಕರೆವರು ಸೀತೆಯೆಂದೆನುತೆ ॥
ಈಮಹಾವನದೊಳು ತಪೋಜಸ ।
ಹೋಮಗಳ ನೆಸಗುತ್ತಮೆಂದುಂ ।
ಕ್ಷೇಮದಿಂದಿಹಿರೇನು ಬೆಸಸುವುದೆಂದನಾ ನೃಪತಿ ॥ ೫॥

ಕ್ಷಮಿಸುವುದು ಸರ್ವಾಪರಾಧವ ।
ನಮಿಸುವೆವು ನಿನಗಿಂದು ರಾಘವ ।
ಕುಮತಿಗಳಿಗೆಮಗೆಲ್ಲಿ ಗೋಚರ ವಹುದು ತವಪದವು ।
ಅಮಿತತೋಷಿಗಳಾದೆವೀದಿನ ।
ಮಮತೆದೋರುತ್ತಿಮ್ಮ ಪುಣ್ಯಾ ।
ಶ್ರಮಕೆ ಬಿಜಯಂಗೈದು ಸತ್ಕಾರವನು ಕೊಂಬುವುದು ॥ ೬॥

ಎನುತ ಕರೆದೊಯ್ಯುತ್ತ ಲವರನು ।
ಘನಮನೋಹರ ಪರ್ಣಮಂದಿರ ।
ಕನುವಿನಿಂದರ್ಘ್ಯಾದಿ ಸತ್ಕಾರಗಳ ನಂದೆಸಗಿ ॥
ವನದೆ ದೊರೆವಾ ಕಂದಮೂಲವ ।
ವಿನಯದಿಂದಾಹಾರಕೀಯು ।
ತ್ತನುಪಮನನತಿವರುಪಚರಿಸಿದರುಭಕ್ತಿಭಾವದೊಳು ॥ ೭॥

ಕಳೆಯುತಂದಿನರಾತ್ರಿಯನು ಮುನಿ ।
ನಿಳಯದಲಿ ತಾವೆಳ್ದು ಮರುದಿನ ।
ಜಲಜಸಖನುದಯದಲಿ ಸಂಧ್ಯಾಕರ್ಮಗಳ ನೆಸಗಿ ॥
ತಳುವದವರನುಮತಿಯ ಕೈಕೊಂ ।
ಡುಳಿಯದೈದುತ್ತಿರಲು ಮುಂಗಡೆ ।
ಯೊಳಗೆ ನಿಂತನು ಖಳವಿರಾಧನೆನಿಪ್ಪ ದಾನವನು ॥೮॥

ಎಳೆಯರಿರ ನೀವಾರು ನಿಮಗೀ ।
ಲಲನೆಯೇನಹ ಳೆತ್ತ ಪೋಪಿರಿ ।
ಕಳೆದುದಲೆ ನಿಮ್ಮಾಯುವಿಂದಿಗೆ ನಿಲ್ಲಿರೆಂದೆನುತ ॥
ಪಲುಮೊರೆಯುತಾಡೊತ್ತಿ ವೇಗದಿ ।
ನಿಳೆಯಣುಗಿಯೆಡೆಗೈದಿ ಪಿಡಿಯು ।
ತ್ತಿಲೆಗೆ ನಿನಗಾನೊಲಿದೆ ನಿಂದೆನ್ನಂಕವೇರೆನಲು ॥೯॥

ಕಂಡು ಲಕ್ಷ್ಮಣನಣ್ಣದೇವನ ।
ಖಂಡವೈಭವಲಕ್ಷ್ಮಿಗಿಂತೀ ।
ಭಂಡ ದೈತ್ಯಾಧಮನ ತೊಡೆ ತಾನಾಯ್ತೆ ಗತಿಯೆನುತ ॥
ಕೆಂಡಮುಗುಳುತ ನೇತ್ರದಲಿ ಕೋ ।
ದಂಡಕೇರಿಸಿ ಹೆದೆಯ ಬಾಣವ ।
ಕೊಂಡು ಜೋಡಿಸುವನಿತರೊಳು ಮುಂಕೊಂಡು ಬಂದಿವರ ॥

ಪಿಡಿಯುತೇರಿಸಿ ಹೆಗಲ ನಸುರನು ।
ಬಿಡುತ ತನ್ನನು ಮುಂದೆ ನಡೆಯುವ ।
ಸಡಗರವ ಕಂಡಂಜಿ ಸೀತೆಯು ಬೆದರಿ ಕೂಗಿದಳು ॥
ತಡವಗೈವರೆ ರಮಣ ದುರುಳನ ।
ಕಡಿಯಬೇಗದೊಳಲ್ಲದಿರಲೆ ।
ನ್ನೊಡೆಯ ತನ್ನನೆ ಕಡಿದು ಮುಂದಕೆ ತೆರಳು ನೀನೆನುತ ॥೧೧॥

ಲಲನೆಭಯದಿಂದುಲಿದನುಡಿ ತಾ ।
ನಲಗಿನಂದದೊಳೆದೆಯ ನಿರಿಯ ।
ಲ್ಕೆಲದೊಳಹ ಲಕ್ಷ್ಮಣನಿಗೆಚ್ಚರಿಸಿದನು ರಾಘವನು ॥
ಸೆಳೆಯುತಿರ್ವರು ಕಡುಗಗಳನಾ ।
ಖಳನಭುಜಗಳನರಿದು ದುಮ್ಮಿ ।
ಕ್ಕಿಳೆಗೆ ಶರಗಳನಿರದೆ ದಳೆದರು ದುರುಳನಂಗದಲಿ ॥೧೨॥

ಅಂದು ಬೀಳುತ ನೆಲದಮೇಲವ ।
ನೆಂದನಾರ್ಯೆ ನೀವು ಸರಳುಗ ।
ಳಂದವಚ್ಚರಿ ಸಹಿಸಲಸದಳವಿದಲೆ ತನಗಿನ್ನು ॥
ಸುಂದರಾಂಗನು ರಾಮನೆಂಬುವ ।
ನಿಂದು ನಿಮ್ಮೊಳಗಾವನೈ ಅರ ।
ವಿಂದನಾಭನದಿವ್ಯಮೂರ್ತಿಯ ತೋರ್ಪುದೆನಗೆಂದ ॥೧೩॥

ಇಂತುನುಡಿವ ವಿರಾಧನಿದಿರೊಳ |
ನಂತಮಹಿಮನು ನಿಂದುಸಲೆ ನಿ |
ಸ್ಚಿಂತರಂಗವದೇನು ಪೇಳೆನ್ನಾನೆ ರಾಘವನು ||
ಚಿಂತೆಯುಳಿಯೆನಲೊಡನವನು ನಿ |
ಶ್ಚಿಂತನಾಗುತ ದಿವ್ಯತೇಜೋ |
ವಂತನಹಗಂಧರ್ವ ಪುರುಷನರೂಪನೊಂದುತಲಿ ||೧೪||

ಕ್ಷಮಿಸುವುದು ಜಗದೀಶಬುದ್ಧಿ |
ಭ್ರಮಣೆಯಿಂ ನಾಂ ಗೈದ ತಪ್ಪನು |
ವಿಮಲಮತಿಯವಧರಿಸು ತನ್ನಯ ಪೂರ್ವಸಂಗತಿಯ ||
ಕಮಲಜನಬಳಿಗೆಂದು ರಂಭೆಯು |
ಗಮಿಸುತಿರಲೊಂದಿರುಳು ಮಾರ್ಗದೆ |
ಕುಮತಿಯಿಂ ನಾನವಳಕೆಣಕಲು ವಿಧಿಯುಖತಿಗೊಂಡು ||೧೫||

ಎಲವೊಲೊಗಂಧರ್ವಕನೆ ತುಂಬುರು |
ಬಲುಹಿನಿಂನೀನಿವಳ ನಿಯಮವ |
ನಳಿದಕಾರಣ ರಾಕ್ಷಸಾಧಮನಾಗೆನುತ ಶಪಿಸೆ ||
ಬಳಿಕನಾನತಿ ದೀನಭಾವದಿ |
ನೊಲಿಸೆ ನುಡಿದನು ಮುಂದೆಭಾಸ್ಕರ |
ಕುಲದೊಳುದಯಿಪ ಪುರುಷನಿಂ ನಿನಗಪ್ಪುದಭ್ಯುದಯ ||೧೬||

ಬಂದುಕಾಲದಿ ರಾಮಲಕ್ಷ್ಮಣ ।
ರಿಂದು ಮುಖಿಯಹ ಸೀತೆಯೊಡನೈ ।
ತಂದು ನೀನಿಹದಂಡಕಾವನದಲ್ಲಿ ಚರಿಸುವರು ॥
ಅಂದು ನೀನಾಲಲನೆಯನು ಬಲು ।
ಹಿಂದ ಪಿಡಿಯಲು ರಾಮನಾಗ್ರಹ ।
ದಿಂದ ಬಾಣವನೆಸೆಯಲೊಂದುವೆ ಮತ್ತೆ ನಿಜತನುವ ॥೧೭॥

ಇಂತು ಪೇಳ್ದ ಪಿತಾಮಹನ ನುಡಿ ।
ಯಂತೆ ನಿನ್ನಿಂದಿಂದು ಬದುಕಿದೆ ।
ನೆಂತು ನಿನ್ನುಪಕೃತಿಯ ಮರೆವೆನಪಾರ ಗುಣನಿಲಯ ॥
ಮುಂತೆ ನೀಂ ತೆರಳುತ್ತೆ ಕಾಣುವೆ ।
ಶಾಂತರಹ ಶರಭಂಗಮುನಿಪರ ।
ನಂತರಾತ್ಮಧ್ಯಾನ ಪರರವರಿಂದ ಲೇಸಹುದು ॥೧೮॥

ತೆರಳಿ ನೀಂವೆಂದೆನುತ ಖಚರನು ।
ಮರಳಲತ್ತಲು ದಾನವಕಳೇ ।
ವರವ ನದನಿಳೆಯೊಳಗೆ ನಿಕ್ಷೇಪಿಸಿ ಬಳಿಕ್ಕವರು ॥
ಸರಸಿಜಾಕ್ಷಿಯು ಬಳಿಯಸೇರುತ ।
ಶೂರಸುತಾಕೆಯು ಮನದ ಭೀತಿಯ ।
ನಿರದೆ ಪಯಣವಬೆಳಸುತಾ ಶರಭಂಗನಾಶ್ರಮವ ॥೧೯॥

ಕಂಡು ಸಾರುವ ಸಮಯದೊಳಗಾ ।
ಖಂಡಲನು ನಭದೊಳ್ವಿಮಾನದೆ ।
ಮಂಡಿಸುತಲಾಶ್ರಮದೊಳಹ ಮುನಿಯೊಡನೆ ಭಾಷಿಸುತ ॥
ಚಂಡಬಲರಿವರ್‍ಯೈದೆ ಕಾಣು ।
ತ್ತಂಡಿಸುತ ಮನದಲ್ಲಿ ತಾಂ ಮರೆ ।
ಗೊಂಡು ಜಾರಲು ನೋಡಿ ವಿಸ್ಮಯಗೊಳುತ ರಾಘವನು ॥ ೨೦॥

ಮುನಿಯಬಳಿಯನು ಸಾರಲಾತನು ।
ಘನಮಹಿಮ ಪರಮೇಶ ಪಾವನ ।
ಜನುಮಯನೆನಿನ್ನಂಘ್ರಿಕಮಲದ ಬರವ ಹಾರೈಸಿ ।
ಇನಿತುದಿನಕಾದಿರ್ದೆನಿಂದೀ ।
ಜನುಮ ಸಾರ್ಥಕವಾಯ್ತು ಬೊಮ್ಮನ ।
ವಿನುತಲೋಕಕ್ಕತಿಥಿಯಾಗಿಹೆನಿಂದು ತಪದಿಂದ ॥ ೨೧॥

ಎನ್ನನೊಯ್ಯಲ್ಕಲ್ಲಿಗಾ ಸಂ ।
ಪನ್ನ ನಿಂದ್ರನು ನಿಂದು ಗಗನದೊ ।
ಳಿನ್ನು ತಡವೇಕೇರು ನೀನಿಂದೀ ವಿಮಾನವನು ॥
ಎನ್ನುತೊಲವಿಂ ಕರೆಯುತಿರ್ದನು ।
ನಿನ್ನ ಬರವನು ಕಂಡು ತಳುವಿದೆ ।
ನಿನ್ನನುಜ್ಞೆಯ ನೀಯಬೇಕೆಂದೆನಲು ಮುನಿವರನು ॥ ೨೨॥

ಮುನಿಪ ನಿನ್ನ ತಪಃಪ್ರಭಾವ ।
ಕ್ಕನುಗುಣದ ಫಲವೊಂದಿದ್ದೈ ನಿಜ ।
ಘನ ಮನೋರಥಸಿದ್ಧಿಯಾದುದು ನಿನಗೆ ಬಲುದಿನಕೆ ॥
ವಿನುತ ಲೋಕಕ್ಕಿಂದು ಪಯಣವ ।
ನನುಗೊಳಿಸು ನೀನೆಂದನುಜ್ಞೆಯ ।
ನಿನಕುಲೋದ್ಭವ ನೀಯಲಾ ಯಮಿವರನು ಮುದವಡೆದು ॥೨೩॥

ದೇವಚೈತ್ರ್ಯಸೋಡೆಯೇರುತ ।
ನೀವು ಮಂದಾಕಿನಿಯದಾಂಟುತ ।
ಪಾವನಾತ್ಮಸುತೀಕ್ಷ್ಣನಾಶ್ರಮಕೈದಲಾಮುನಿಯು ॥
ತಾವನೀಯುತ ನಿಮಗೆ ಬಹುಸಂ ।
ಭಾವನೆಯನೆಸಗುವನು ತನಗಿ ।
ನ್ನೀವ್ರುದಾಜ್ಞೆಯನೆನುತ ಬೆರೆದನು ಶ್ರೌತದಗ್ನಿಯಲಿ ॥೨೪॥

ಬಳಿಕ ಮಲ್ಲಿಯತಾಪಸರ್ಕಳು ।
ಕೆಲರು ವೈಖಾನಸರು ಮತ್ತಂ ।
ಕೆಲರು ಪೂರ್ವದವಾಲಖಿಲ್ಯರು ಕೆಲರೆಲೆಯಣಿಗಳು ॥
ಹಲವು ಬಗೆಯಾವ್ರತಿಗಳೆಲ್ಲರು ।
ಬೆಳಗುವರೊ ದಿಕ್ತಟವನೆಂಬಂ ।
ತಲಘುತೇಜೋನ್ವಿತರು ಬಂದರು ಬಳಿಗೆರಾಘವನ ॥೨೫॥

ಬಡಿಯುನೆಂತಾವಜ್ರಿಯು ಮುರರಿ ।
ಗೊಡೆಯುನಹೆ ನೀನಂತುಮನುಜರಿ ।
ಗಡವಿಪ್ರೊಕ್ಕಿಹೆ ತಾತನಾಜ್ಞೆಯ ಪಾಲಿಸಲ್ಕಿಂದು ॥
ಬಡಮುನಿಗಳಾದೆಮ್ಮ ಬಿನ್ನಪ ।
ಕೆಡೆಯುನೀಯುತ ನಿನ್ನಮನದಲಿ ।
ದೃಢತರೋನ್ನತಕೀರ್ತಿವಡೆಯ್ಯ ಮೂರುಲೋಕದಲಿ ॥ ೨೬ ॥

ತಂದೆ ತನ್ನಯ ಸುತರನೊಲಿದಾ ॥
ವಂದದಿಂ ಸಲಹುವನೊ ಆಪರಿ ।
ಯಿಂದ ರಾಜನು ಜನವ ಸಲಹುವುದಾತ್ಮಧರ್ಮವಲಾ ॥
ಇಂದುನಿನ್ನೀಪ್ರಜೆಗಳಾದೆವು ।
ಗೊಂದಿರುವ ಕಷ್ಟವನು ಪರಿಹರಿ ।
ಸೆಂದು ಬೇಡುವೆವದನು ಕರುಣಿಸಿ ಸಲಹು ಕರುಣಾಳು ॥ ೨೭ ॥

ಅರಸ ನಮ್ಮಯ ತಪಕೆ ರಕ್ಕಸ ।
ರಿರದೆ ವಿಘ್ನವನೆಸಗಿ ನಮ್ಮನು ।
ಮರುಕವಿಲ್ಲದೆ ಘಾತಿಸುತ ಬಲುಹಿಂಸೆಗೈದಸರು ॥
ಮರೆಯುಹೊಕ್ಕಿಹೆವಿಂದು ನಿನ್ನನು ।
ಶರಣಜನ ಸುರಕ್ಷಕನೆ ಖರೊ ।
ಳರನು ಸಂಹರಿಸುತ್ತ ರಕ್ಷಿಪುದೆಮ್ಮ ನೆನಲವರು ॥ ೨೮ ॥

ಮರುಗಿದನು ಮನದಲ್ಲಿ ಋಷಿಗಳ ।
ದರುಮಕೆಡರುಂಟಾಯ್ತೆ ಶಿವಶಿವ ।
ದುರುಳರಕ್ಕಸರುಬ್ಬಟೆಯ ನಿವರೆಂತು ಸೈಸುವರು ॥
ಬರವಸವನೀಯುತ್ತೆ ಭಯವನು ।
ಹರಿಸಬೇಕೆಂದೆನುತ ರಾಮನು ।
ಭರದೆ ಹೆದೆಯನು ಧನುವಿಗೇರಿಸುತೆಂದನವರೊಡನೆ ॥೯॥

ಬೆದರದಿರಿ ಮುನಿಗಳಿರ ನಿಮ್ಮ ।
ಭ್ಯುದಯಮುಂ ನಿಜಪಿತನಮೂಲ್ಯದ ।
ವಿಧಿಯು ಮೆನ್ನನು ವನಕೆ ತಂದುದು ಮೇಣ್ಪ್ರಯೋಜನವು ॥
ಇದನು ಬಿಟ್ಟೆನಗಿಲ್ಲ ಪೆರತೊಂ ।
ದದಕೆ ಬಂದವನಲ್ಲ ಭೀತಿಯ ।
ನೆದೆಯೊಳನ್ನಿಡಸಲ್ಲ ನಂಬುವುದಿದನು ದಿಡವಾಗಿ ॥೨೦॥

ಇಂದು ಮೊದಲಾದುಷ್ಟರಾಕ್ಷಸ ।
ವೃಂದವನು ನೆರೆಕಡಿದು ಮುನಿಜನ ।
ಬಂಧುವೆನಿಸಿಪೆಸರ ನಾನುವೆ ನಿಮ್ಮತಪಗಳಿಗೆ ॥
ಕುಂದುಬಾರದತೆರದೆ ನೀಂ ಸ್ವ ।
ಚ್ಛಂದದಿಂದವುಗಳನು ಮಾಡುತ ।
ಬಿಂದಣಂದದೆ ಸುಖದೊಳಹುದಿನ್ನೆಂದನಾರಾಮ ॥೨೧॥

ಇಂತುಮುನಿಜನಕಭಯಮೀಯುತ ।
ಮುಂತೆನಡೆದು ಸುತೀಕ್ಷ್ಣಮುನಿಪನ ।
ನಂತ ಸತ್ಕಾರಗಳನೊಂದುತಲವನನುಜ್ಞೆಯಲಿ
ಚಿಂತೆಯಿಲ್ಲದೆ ರಾತ್ರಿಯನು ಬಲು ।
ಸಂತಸದೊಳಾಶ್ರಮದೆ ಕಳೆದ ।
ತ್ಯಂತವಿನಯದೆ ನಮಿಸುತವರಿಗೆ ಮಾರನೆಯದಿನಡೆ ||೩೧||

ತೆರಳಲಾಜ್ಞೆಯನಾಂತು ಬಳಿಕ ।
ಲ್ಲಿರದೆ ಸಿಂಗಾಡಿಯನು ಭುಜದಲಿ ।
ಧರಿಸಿಮದಿಸಿದ ಗಜದವೊಲು ಮುಂಕೊಂಡು ನಡೆಯುತಿರೆ ।
ತರಳೆ ನೋಡಿದಳಾತ್ಮವಲ್ಲಭ ।
ನಿರವಮೆಲ್ಲನೆ ಸನಿಹಕ್ಕೈದುತ ।
ಸರಸಭಾವದೊಳರುಹಿದಳು ಮನದರ್ಥವನು ಸೀತೆ ||೩೨||

ಚಿತ್ತವಲ್ಲಭ ಲಾಲಿಪುದು ಸತಿ ।
ಬಿತ್ತರಿಸುಮೀನುಡಿಯ ನೊಲವಿಂ ।
ದುತ್ತಮೋತ್ತಮ ಧರ್ಮನಿಷ್ಠನು ನೀನು ಜಗವರಿಯೆ ||
ಮತ್ತತನವೇನಿಲ್ಲ ಪರಸತಿ ।
ಯತ್ತ ಬಯಕೆಯದಿಲ್ಲವಾದೊಡೆ ।
ಮೊತ್ತಿಕೊಂಡಿಹುದೊಂದು ಪರಪೀಡನೆಯಕಲ್ಮಷವು ||೩೪||

ತಾತನಾಣತಿವಿಡಿದು ಮುನಿಗಳ ।
ರೀತಿಯಲಿ ವನದಲ್ಲಿ ಚರಿಸವಿ ।
ನೀತನಂದವೆ ಶಸ್ತ್ರಧಾರಣವೇಕೆ ನಿನಗಿಲ್ಲಿ ॥
ಭೂತಹಿಂಸಾಕ್ಷತ್ರ ಧರ್ಮದ ।
ನೀತಿ ಸಲುವುದು ರಾಜ್ಯದೊಳಗಿರ ।
ಲೀತಪಶ್ಚರ್ಯದೊಳು ಸಲುವುದೆ ಪೇಳು ಮತ್ಪತಿಯೆ ॥೨೫॥

ಎನ್ನಮನಕೀರೀತಿ ತೋರ್ಪುದು ।
ಸನ್ನುತಾಂಗನೆ ನಿನ್ನ ಚಿತ್ತದೊ ।
ಳಿನ್ನು ತೋರಿದಪರಿಯೊಳೆಸಗುವುದೆನುತ ಸತಿಯುಸಿರೆ ॥
ತನ್ನ ಮನದೊಳು ಹಿಗ್ಗಿ ಗುಣಸಂ ।
ಪನ್ನನಾರಾಘುವನು ಸತಿಯುರ ।
ರನ್ನಕೆಂದನು ಲೋಕಕತಿಹಿತವಪ್ಪವಾಕ್ಯವನು ॥೨೬॥

ವಲ್ಲಭೆಯೆ ನಿನಗೊರೆವೆನಿದಕೇ ।
ಳೆಲ್ಲಿ ಪಾರ್ಥಿವನಾಳ್ವನಾ ನೆಲ ।
ದಲ್ಲಿ ತಾಂ ಪ್ರಜೆ ಮೊರೆಯನಿಡೆಯುದನೊಲಿದು ರಕ್ಷಿಸಲು ।
ಬಿಲ್ಲುಕಣೆಗಳನೈದೆ ತಳೆಯುತ ।
ಖುಲ್ಲರುಪಟಳವನ್ನುತಗ್ಗಿಪ ।
ದಲ್ಲದಿರ್ದೊಡೆ ನರಕಭಾಜನನಪ್ಪನಾನೃಪತಿ ।೨

ಇಂದು ನಾವೀದಂಡಕಾವನ |
ಕೆಂದು ಬಂದೊಡೆ ಋಷಿಗಳೆಲ್ಲರು |
ಬಂದು ರಾಕ್ಷಸರಿಂದ ತಮ್ಮಯ ಯಾಗಗಳು ನೃಪನೆ ||
ಹೊಂದಿದುವು ದುರ್ದಶೆಯನವು ನಿ |
ನ್ನಿಂದಲುಳಿಯಲುಬೇಕು ದುಷ್ಟರ |
ಕೊಂದುನಮ್ಮನು ರಕ್ಷಿಸೆನಲಾಂ ಕೊಟ್ಟೆನಭಯವನು || ೩೮ ||

ಕಂದಮೂಲಫಲಾದಿಗಳ ತಾಂ |
ತಿಂದು ಜಪನಿಯಮೋಪವಾಸಗ |
ಳಿಂದ ಕಾಯಕ್ಲೇಶವಾನುತ ಘೋರತಪಗಳನು ||
ಛಂದದಿಂದಾಚರಿಪಮುನಿಜನ |
ವೃಂದವನು ನೆರೆ ಬಾಧಿಸುತ್ತಿಹ |
ಹಂದೆರಕ್ಕಸ ಮಂದೆಯನು ಸರಳಿಂದೆ ಸವರುವೆನು || ೩೯ ||

ನೀರೆನಿನಗೆನ್ನಲ್ಲಿನೇಹವ |
ಪಾರವೆಂಬುದು ನಿನ್ನ ನುಡಿಯಿಂ |
ತೋರುವುದು ಬೇರಿಲ್ಲನಡೆಯೆಂದಂದು ತೆರಳುತಲಿ ||
ಸಾರಿ ಋಷ್ಯಾಶ್ರಮಗಳನು ನಲ |
ವೇರಿಕಾಲವಕಳೆದು ಕೆಲವೆಡೆ |
ಮೂರುತಿಂಗಳು ಮತ್ತೆಕೆಲವೆಡೆಯಾರುತಿಂಗಳನೆ || ೪೦ ||

ಇಂತುನವವರ್ಷಗಳ ಕಳೆಯುತ |
ಲಂತ್ಯದಲಿ ಹತ್ತನೆಯುವರ್ಷವ |
ನಂತಮುನಿಸಂಸೇವ್ಯರೆನಿಸುವಗಸ್ತ್ಯಮುನಿವರರ ||
ಪಿಂತಣದ್ಭುತಮಹಿಮೆಗಳನೆನೆ |
ದಂತರಂಗದೆ ಪೊಗಳಿ ತೇಜೋ |
ವಂತರಪ್ಪವರಾಶ್ರಮವ ಪುಗುತೆರಗಲವರಂದು ||೪೧||

ಕ್ಷೇಮವೇನೈ ರಘುಜ ನಿನ್ನೀ |
ಪ್ರೇಮಸೋದರನಿವನು ಕುಶಲಿಯೆ |
ಭಾಮಿನೀಮಣಿ ಸುಖದಿನಿಹಳೇ ಜಾನಕೀದೇವಿ ||
ನೀ ಮಹಾತುಮ ನಿನ್ನ ದರ್ಶನ |
ದಾ ಮಹಾಸುಖವೆನಗೆ ಲಭಿಸಿದು |
ದೀ ಮಹಾಟವಿ ಪೂತವಾದುದು ನಿನ್ನ ಬರವಿನಲಿ ||೪೨||

ಬರುವೆ ನೀಂ ನಿನಗೀಯಬೇಕೆಂ |
ದರಿಭಯಂಕರ ವಿಷ್ಣುಧನುವಿದ |
ನುರುಶರಂಗಳು ಬತ್ತದಿಹ ಬತ್ತಳಿಕೆಯೊಡನಿರದೆ ||
ಮೆರೆಯುವೀ ಖಡ್ಗವುಮನಿಂದಿನ |
ವರೆಗವೋವಿದೆನಯ್ಯ ನೀಂ ಸ್ವೀ |
ಕರಿಪುದಿವನೆಂದಿತ್ತು ಮಂತ್ರನ್ಯಾಸಪೂರ್ವಕದೆ ||೪೩||

ಧುರದೊಳದಿರಾದಸುರರಸುವನು |
ಹುರಿದು ಮುಕ್ಕುವುವಲ್ಲದಿಲ್ಲವು |
ಕೊರತೆಯಿವುಗಳೊಳವು ನಿಶಾಚರ ಕುಲವಿನಾಶಿಗಳು ||
ಹರಿಯು ಪೂರ್ವದೆ ರಕ್ಕಸರ ಸಂ |
ಹರಿಸಿದನು ತಾನೀಧನುವಿನಿಂ |
ಧರಿಸುತಿದ ನೀಂ ಸುಭವನೆಂದೆನುತಾಗ ಹರಸಿದನು ||೪೪||

ಮುನಿಪನಿತ್ತಾಧನುವು ಮೊದಲಾ |
ದನಿತುವಂ ಸ್ವೀಕರಿಸಿ ರಾಮನು |
ತನಗೆ ವಾಸಕ್ಕೊಂದು ತಾವನು ಬೆಸಸಿ ನೀವೆನಲು ||
ಮನದೆ ತಾಂ ಕ್ಷಣಮಾತ್ರ ಜಾನಿಸು |
ತನುವಹುದು ನಿನಗೀ ಸಮೀಪದ |
ಬನವು ನೀನಲ್ಲಿರ್ದೊಡಪ್ಪುದು ಸಕಲಸಂಪದವು ||೪೫||

ಆದನು ಕರೆವರು ಪಂಚವಟಿಯೆಂ |
ದದರೊಳೊಣಗವು ಪುಷ್ಪಫಲಗಳು |
ಸದಮಲವು ತತ್ಪುಣ್ಯದೇಶವು ಸೌಖ್ಯದಾಯಕವು ||
ಪದುಮನೇತ್ರನೆ ನಿನ್ನ ಹೃದಯದ |
ಹದನ ಬಲ್ಲೆನು ತಾವು ನಿನಗದು |
ಮುದವನೀವುದು ಪರ್ಣಶಾಲೆಯ ರಚಿಸು ನೀನಲ್ಲಿ ||೪೬||

ಎಂದು ನುಡಿಯುವಗಸ್ತ್ಯಮುನಿಪಗೆ ।
ವಂದನೆಯ ಗೈದವನನುಜ್ಞೆಯ ।
ನೊಂದಿ ಸೀತಾಲಕ್ಷ್ಮಣರನೊಡಗೂಡಿ ರಾಘವನು ॥
ಮುಂದೆ ಪೋಗುತ ಮಧ್ಯಮಾರ್ಗದೊ ।
ಳೊಂದು ವಟವೃಕ್ಷದೊಳು ಮೇಘ ।
ಸ್ಕಂಧದಂದದಿಸಿರ್ದ ಗೃಧ್ರನ ಕಂಡು ಬೆಸಗೊಂಡ ॥೪೭॥

ಎಲವೊ ನೀನಾರಾವುದೈ ನಿಜ ।
ಕುಲವು ಪೆಸರೇನೆನ್ನೊಳೊರೆಯೆನ ।
ಲಲಘುಮತಿ ಕೇಳೆಂ ಜಟಾಯುವು ಸಖನು ತವಪಿತಗೆ ॥
ಕುಲವ ಪೇಳುವೊಡರುಣಪುತ್ರನು ।
ಬಲಯುತನು ಸಂಪಾತಿಯೆಂಬವ ।
ನಿಳೆಯೊಳಗ್ರಜನೆನಗೆ ನಿನಗಿನ್ನೆಂ ಸಹಾಯಕನು ॥೪೮॥

ನಿನ್ನ ಬಳಿಯೊಳಗಿಹೆನು ಗುಣಸಂ ।
ಪನ್ನ ಲಕ್ಷ್ಮಣನೊಡನೆ ನೀನಿರ ।
ದನ್ಯಕಾರ್ಯಕೆ ತೆರಳೆ ರಕ್ಷಿಸುತಿಹೆನು ಜಾನಕಿಯ ॥
ಮನ್ನಿಪುದು ನೀನೆಂದ ಪಕ್ಷಿಯ ।
ಮನ್ನಣೆಯಿನಾದರಿಸುತೆರಗು ।
ತ್ತಿನ್ನನೇ ನೀನೆನಗೆ ಬಾಂಧವನೆಂದನಾರಾಮ ॥೪೯॥

ಪೇಳುತೀಪರಿ ಪಂಚವಟಿಯು ವಿ |
ಶಾಲಸುಕ್ಷೇತ್ರವನು ಸಾರ್ದನು |
ಕೂಲನಾದೀಯೆಡೆಯು ನೋಡೈ ತಮ್ಮ ನಾವಿಲ್ಲಿ ||
ಕಾಲವನು ಕಳೆಯಲ್ಕೆ ತಳಿರಿನ |
ಶಾಲೆಯೊಂದನು ರಚಿಸು ನೀನೆನ |
ಲಾಲಯವ ಧಿಕ್ಕರಿಸುವಾಶ್ರಮವೊಂದನೆಸಗಿದನು ||೫೦||

ನೋಡಿದನು ರಾಘವನು ಲಕ್ಷ್ಮಣ |
ಮಾಡಿದಾವರಪರ್ಣಶಾಲೆಯ |
ನಾಡಿಗಚ್ಚರಿ ತಮ್ಮ ನಿನ್ನಯ ಬುದ್ಧಿಕುಶಲತೆಯು ||
ನೀಡುವೊಡೆ ನಿನಗುಡುಗೆರೆಯನೀ |
ಕಾಡಿನೊಳು ದುರ್ಲಭವು ಪಡಿಯಿದು |
ಗಾಢತರದಾಲಿಂಗನವು ಕೊಳ್ಳೆನುತ ಬಿಗಿದಪ್ಪಿ ||೫೧||

ಲೋಲಲೋಚನೆಯೊಡನೆ ಮಿಂದು ವಿ |
ಶಾಲಗೋದಾವರಿಯೊಳಮಲದು |
ಕೂಲಗಳ ಧರಿಸುತ್ತ ಸಂಧ್ಯಾದಿಗಳ ನಿರದೆಸಗಿ ||
ಮೇಲೆನಿಪ ಸುಮುಹೂರ್ತದಲಿ ಬಲ |
ಶಾಲಿ ಲಕ್ಷ್ಮಣನೊಡನೆ ನೂತನ |
ಶಾಲೆಯನು ಸಂಭ್ರಮದೆ ಪೊಕ್ಕನು ದಾನವಧ್ವಂಸಿ ||೫೨||

ಮೊದಲನೆಯ ಸಂಧಿ ಸಂಪೂರ್ಣಂ.

# ಎರಡನೆಯ ಸಂಧಿ.



ಸೂಚನೆ|| ಭೋಗದಾಸೆಯ ಶೂರ್ಪಣಖೆಯನು |
ಮೂಗನರಿದಟ್ಟಲ್ಕೆ ಲಕ್ಷ್ಮಣ |
ನಾಗರಾಮನ ಕೆಣಕಿಯಳಿದರು ಖರಮುಖಾಸುರರು ||



ನೂಕುತಿರ್ದರು ದಿನಗಳನು ನಿ |
ರ್ವ್ಯಾಕುಲರು ತಾವಲ್ಲಿ ಮೂವರು |
ಮೇಕವಾನಸರಾಗಿ ಮರೆದಾವಿಪಿನದಾಯುಸವ |
ಸಾಕು ಸಾಕಾತಪದ ತಾಪವು |
ನೂಕದೆಮ್ಮಿಂದೆಂಬ ಜನದವಿ |
ವೇಕಕುರೆಬೇಸತ್ತನೆನೆ ರವಿದಕ್ಷಿಣಕೆ ಸರಿದ ||೧||

ಸಂದುಸಿಕ್ಕಿತು ತನಗದೆನ್ನುತ |
ಬಂದನಾಹೇಮಂತಭೂಪನು |
ಮಂದಿಯನು ಚಳಿಯೆಂಬ ಸಂಕಲೆಯಿಂದ ಬಂಧಿಸುತೆ ||
ಅಂದಗೆಡಿಸುವ ಮಂಜಿನಸ್ತ್ರಗ |
ಳಿಂದಲಿರಿಯಲು ಸಹಿಸಲಾರದೆ |
ನೊಂದು ಬಯಸಿತು ಮಂದಿ ದಿನಮಣಿಗುತ್ತರಾಯಣವ ||೨||

ನೀರನೆಳಸದು ಜನವು ಪೂವಿನ |
ಹಾರವಾನದು ಮಾಯದಲೆ ಕಾ |
ಸಾರಗಳೊಳುರೆ ಕಾಯಲಿಕ್ಕೈಸಿದುದು ವಹ್ನಿಯನು ||
ವಾರಿಜಂಗಳ ದಳಗಳುದಿರಿದು |
ವಾರಿಪೋದುವು ರವಿಯಕಿರಣಗ |
ಳಾರಯಿಸಿದುವು ಸಕಲಜಂತುಗಳುಷ್ಣವಸ್ತುಗಳ ||೩||

ಈ ತೆರದಹಿಮಕಾಲದೊಳಗನು |
ಜಾತಸೀತೆಯರೊಡನೆ ರಾಘವ |
ನಾತಪೋಜನಯೋಗ್ಯವಾಗಿಹ ಪರ್ಣಮಂದಿರದೆ ||
ಶೀತಭಯದಿಂ ಹರಿಣದಜಿನವ |
ನಾತುಮೈಸೊಗಸಿಂದ ಮೆರೆಯುತ |
ವೀತಿಹೋತ್ರನ ದಿವ್ಯತೇಜವನಿಳಕೆಗೈಯುತಿರೆ ||೪||

ಬಂದಳವರೆಡೆಗಾಗಿ ರಾಕ್ಷಸ |
ವೃಂದದೇಳಿಗೆಗಶುಭದಾಯಿಕೆ |
ಮಂದಮತಿಗಳಿಗಗ್ರನಾಯಿಕೆ ಕುಮುಖಿ ಶೂರ್ಪಣಖಿ ||
ನಿಂದು ನೋಡಿದಳಮಲರಾಘವ |
ನಂದಚಂದವ ಕಾಮಶರಹತಿ |
ಗಂದು ಮೈಗೊಟ್ಟೆರಗಿನುಡಿಸಿದಳಾ ದೃಢವ್ರತನ ||೫||

ಆರು ನೀನೆಲೊವೀರ ನಿನಗೀ ।
ನಾರಿಯೇನಹಳಾತನಾವನ ।
ಪಾರಪೌರುಷನಂತಿಹನು ನಿಮಗಿಲ್ಲಿ ಬರವೇನು ॥
ಶೂರರಹರಕ್ಕರರು ಚರಿಸುವ ।
ಘೋರಕಾನನವೆಂಬುದರಿಯದೆ ।
ಯಾರಿ ನಡೆವುದಕೇನುಕಾರಣವೆಂದಳಾದನುಜೆ ॥೬॥

ನೋಡಿದನು ರಾಘುವನು ಮಿಗೆ ಮಾ ।
ತಾಡಿದನು ಕೇಳಬಲೆ ಲೋಕದೆ ।
ರೂಢವಾಗಿಹಸೂರ್ಯವಂಶದ ದಶರಥೋರ್ವಿಪನಾ ॥
ಗಾಢಮೋಹದ ಪುತ್ರರಾವೀ ।
ಗಾಡಿಕಾತಿ ಮದೀಯಸುದತಿಯು ।
ಕಾಡಿಗಾಪಿತೃವಾಕ್ಯಪಾಲನೆಗಾಗಿ ಬರವಾಯ್ತು ॥೭॥

ಕರೆವರೆನ್ನನು ರಾಮನೆನುತಲಿ ।
ಮೆರೆವಲಕ್ಷ್ಮಣನಾಮವೀತಗೆ ।
ಕಿರಿಯನಿವನೆನ್ನಿಂದ ಸೀತಾಹ್ವಯಳು ತಾನಿವಳು ॥
ಅರಿಯುಲಗ್ಗದಜನಕ ಚಕ್ರೇ ।
ಶ್ವರನ ಕುವರಿಯು ತನ್ನಭಾಗ್ಯದ ।
ಸಿರಿಯು ನೀನಾರೇತಕ್ಕೈದಿದೆ ಪೇಳು ನಿಶ್ಚಯವ ॥೮॥

ಸರಸಮಾದಾನುಡಿಯನಾಲಿಸಿ ।
ಹರಿಸಗಡಲೊಳ್ಮುಳುಗುತಸುರಿಯು ।
ಮೆರೆವಲಂಕಾಧೀಶರಾವಣನನುಜೆ ತಾನಹೆನು ॥
ಧರೆಯೊಳೆನ್ನನು ಶೂರ್ಪಣಖೆಯೆಂ ।
ದೊರೆವರೀಯಭಿಧಾನವನು ಕೇ ।
ಳ್ದರಿಯೆಮೆಂಬಾಜನವು ದುರ್ಲಭವಲ್ತೆಲೋಕದಲಿ ॥೯॥

ರಂಭೆಯೂರ್ವಶಿಯರ್ಕಳೆನ್ನನಿ ।
ತಂಬಬಿಂಬಕೆ ಸಾಟಿಯೇ ಮೇ ।
ಣಂಬುಜೋದ್ಭವನರಸಿ ಸರಸತಿ ತನಗೆ ಸರಿಯಹಳೇ ॥
ಎಂಬೊಡತಿಶಯವಲ್ಲ ಕೇಳಲ ।
ರಂಬನಾಸತಿಗಿತಿಯರೆನ್ನೀ ।
ಕುಂಭಕುಚಕೇನೆಣೆಯೆ ತೆಗೆ ತನ್ನಂಗುಟಕೆ ಸರಿಯೇ ॥೧೦॥

ಮಾರಿದೆನು ದೇಹವನಿದನು ನಿನ ।
ಗಾರದರ್ಶನಫಲವೊ ಕಾಣೆನು ।
ಸಾರವಹಸಂಸಾರವೊದವಿದುದಿಂದು ಪುಣ್ಯವಲಾ ॥
ಧೀರರೆನಿಬರೊ ರಾಕ್ಷಸೇಂದ್ರರ ।
ಪಾರಸಾಹಸದೋರಿಬೇಡದ ।
ರಾರಿಗೊಲಿಯದ ಚಲುವೆ ನಿನಗಾನೀಗಳೊಲಿದೆನಲಾ ॥೧೧॥

ಬರುವಕಾಲದೆ ಪುಣ್ಯವಾರಿಗು |
ವೊರೆಯದೈದುವುದೆಂಬನಾಳ್ನುಡಿ |
ಯರಿಯಲೀಗಳು ಸಫಲವಾದುದು ನಿನ್ನವಿಷಯದಲಿ |
ಅರಸ ನೀನಿನ್ನೇಳು ಮನುಮತ |
ನೊರಸೊರಸು ಘನವಾಯ್ತು ತನ್ನನು |
ವರಿಸು ಬಾರೆಂದೆನಲು ನಸುನಗುತೆಂದನಾರಾಮ ||೧೨||

ಸುರರ ಲೆಕ್ಕಿಸದಿರ್ಪದಾನವ |
ರರಸನಿಗೆ ಮಾನಾಪಹರಣವ |
ನಿರದೆ ಬಯಸುವುದಸುರಿ ಕೇಳ್ನಿನಗಿಂದು ತರವಲ್ಲ |
ಧರಣಿಯೊಳು ನೀಂ ಗೈದದೋಷವ |
ನೊರಗಿಪುದು ಜನವಾತನಲಿ ದನು |
ಜರಿಗಕೀರ್ತಿಯನೀವಮಾರ್ಗಕೆ ಮನವನೀಯದಿರು ||೧೩||

ಜಾಣೆಕೇಳಿಂದೆನ್ನ ನಿಯಮವ |
ಬಾಣವೊಂದೇವಾಣಿಯೊಂದೇ |
ಪ್ರಾಣಪದಕವ ಪೋಲ್ವಪತ್ನಿಯುವೋರ್ವಳೇ ತನಗೆ |
ಮಾಣು ನಿನ್ನಭಿಲಾಷೆಯನು ಶಿವ |
ನಾಣೆ ನಾನಿದ ತಪ್ಪಿ ನಡೆಯೆನು |
ಕೇಣಗೊಳ್ಳದೆ ತೆರಳು ನೀನಿನ್ನೆಂದು ನೃಪನೊರೆದ ||೧೪||

ಗಾಯವನು ತೋರಲ್ಕೆವೈದ್ಯನು ।
ಮಾಯಿಸುವ ಮದ್ದೀಯದಿರ್ಪನೆ ।
ಕಾಯಬಲಪುಷ್ಟಿಯನು ಪಡೆದಿಹನಿನ್ನವಂದಿಗರು ॥
ಕಾಯಜಾತನ ತಾಪಕೌಷಧ ।
ವೀಯಬೇಕೆಂದಬಲೆಯಾಚಿಸ ।
ಲೀಯದಿರ್ಪುದು ಮತವೆ ಸುಡು ನಿನ್ನನುಚಿತವ್ರತವ ॥೧೫॥

ಎನುತೆ ದುರುಳೆಯು ಹಲುಬುತಿರಲಾ ।
ಮನುಕುಲೇಶನು ಕೇಳಿ ಸೀತೆಯ ।
ಮನದ ಬೇಸರನೊರಸಬೇಕೆಂದಂದು ಮನದಂದು ॥
ದನುಜೆ ತನಗೀಕಾರ್ಯ ಸಲುವುದೆ ।
ವನಿತೆ ಜತೆಯೊಳಗಿಹಳು ನೀನೆ ।
ನ್ನನುಜನನು ವರಿಸಿಂದು ತಾನೇಕಾಂಗಿಯಾಗಿಹನು ॥೧೬॥

ಭೇದವೇನನುಜನೊಳು ನಿನಗದು ।
ಸಾಧುವೆಂದೆನಲವಳು ಕಾಮನ ।
ಬಾಧೆಗಾರದೆ ಪೋಗಿ ಯಾಚಿಸಲದಕೆ ಸೌಮಿತ್ರಿ ॥
ಸಾಧುಮಾರ್ಗದೆ ಬೊಮ್ಮಚರಿಯುವ ।
ಸಾಧಿಸುತ್ತಿಹೆನವಧಿಯನ್ನೆಗ ।
ವಿಾದುರಾಗತವಾಗದೆನ್ನೊಳು ಸಾಗು ನೀನೆನಲು ॥೧೭॥

ಕೋಪವುಕ್ಕಿದುದೊಡನೆ ಮನ್ಮಥ |
ತಾಪ ಸುಕ್ಕಿದುದೆನ್ನನೀಪರಿ |
ಪಾಪಿಗಳು ಪರಿಹಾಸಗೆಯ್ವುವೊಲಾಯ್ತಲಾ ಎನುತ ||
ಓಪಳೆರ್ದಪಳೆಂಬಗರ್ವವೊ |
ಭೂಪುಭೂಪಲೊ ಹಂದೆರಾಮನೆ |
ಯಾಪಿನಾಕಿಯುಕರೆಯುತುಳುಹಾ ನಿನ್ನವಲ್ಲಭೆಯು ||೧೮||

ಅರಿಚುತೀಪರಿ ಕುಪ್ಪಳಿಸಿ ಮುಂ |
ಬರಿದು ಸೀತೆಯಮೇಲೆ ರಭಸದಿ |
ನೆರಗಲೈತಹದುಷ್ಟೆಯನು ಕೈಯಿಂದಲಡಗಟ್ಟಿ ||
ಅರಸ ಸೂಚಿಸಲೊಡನೆ ಲಕ್ಷ್ಮಣ |
ನಿರದೆ ಸಳಿಂ ಮೂಗುಕಿವಿಗಳ |
ನರಿಯೆ ಹಾಹಾರವದೆ ಹಾಯ್ದಳು ಬಂದಪಥವಿಡಿದು ||೧೯||

ಸದೆದು ಸುಜನರನಾಜನಸ್ಥ |
ನದಲಿ ಬಹುಬಲದೊಡನೆ ರಾಜಿಪ |
ಮದಮುಖರ ಖರದೂಷಣರ ತನ್ನನುಜರೆಡೆಗಿರದೆ ||
ಬೆದರುತೊದರುತ ಮುಖದೆ ಪರಿವಾ |
ರುಧಿರಮಂ ತಾನುಟ್ಟಸೀರೆಯೊ |
ಳದಿಮುತರಿಚುತ ಬಂದು ಬಿದ್ದಳು ಕಾವುದೆಂದೆನುತ ||೨೦||

ನೋಡಿವನು ಖರನಾತ್ಮಸೋದರಿ ।
ಗಾಡಬಾರದಭಂಗವೊದವಿತೆ ।
ದಾಡೆಯಲುಗಿದನೀಚನಾವನುಕಾಲಭೈರವನ ॥
ಆಡು ವನಿತಾಮಣಿಯೆ ನಿನಗೀ ।
ಕೇಡದಾರಿಂದಾಯ್ತು ಪಾಪಿಯ ।
ಬಾಡನಾರೋಗಣೆಗೆ ಬಡಿಸುತ ನಿನ್ನ ತಣಿಸುವೆನು ॥ ೨೧॥

ಸುರರು ಯಕ್ಷರು ಕಿನ್ನರರು ನ ।
ಮ್ಮೊರೆಗೆ ಬರ್ಪರೆ ಸಾಲರಾಹುಲು ।
ನರರ ಮಾತಂತಿರಲಿ ಗಣನೆಯೊಳಿಲ್ಲ ನಮಗವರು ॥
ಹರಿಹರಬ್ರಹ್ಮಾದಿಗಳು ನ ।
ಮ್ಮರಮನೆಯ ಕಾದಿಹರು ಶಿವಶಿವ ।
ಪಿರಿಯ ಸೋಜಿಗವಲ್ತೆ ನಿನ್ನಯವಿಕೃತರೂಪವಿದು ॥ ೨೨॥

ಎಂದು ನುಡಿವಾದನುಜಪತಿಯೊಡ ।
ನೆಂದಳಿಂತಾಶೂರ್ಪಣಖಿ ಕೇ ।
ಳ್ಬಂದಿಹರು ಬನಕಿಂದಯೋಧ್ಯಾಧಿಪನ ದಶರಥನ ॥
ನಂದನರ್ಕಳು ರಾಮಲಕ್ಷ್ಮಣ ।
ರೆಂದು ನಾಮವವರ್ಗ್ಗೆ ರಾಮಂ ।
ಗಿಂದುನಿಭಮುಖಿ ಸೀತೆಯೆಂಬಳು ಪತ್ನಿಯಾಗಿಹಳು ॥ ೨೩॥

ರೂಪಿನಲಿ ಮನುಮತನನದಟಿನೊ ।
ಳಾಪಿನಾಕಿಯ ಸೋಲಿಸರು ವರ ।
ಚಾಪಹಸ್ತರು ಕೋಮಲಾಂಗರು ಮೇಣ್ ಸಹೋದರರು ॥
ತಾಪಸರವೋಲ್ಸಾರುಡೆಯನಾಂ ।
ತಾಫಲಂಗಳ ಮೆಲುವರೆಂತುಂ ।
ಚಾಪಲಂಗಳಗೆದೆಯನೀಯರು ಧೀರಮಾನಸರು ॥ ೨೪॥

ಆತಳೋದರಿ ಸೀತೆ ಭುವನ।
ಖ್ಯಾತೆ ಸುಗುಣೋಪೇತೆ ಸಜ್ಜನ ।
ಗೀತೆ ದೋಷಾತೀತೆ ಸತ್ಕುಲಜಾತೆ ಸುವಿನೀತೆ ॥
ಆತರುಣಿಯನು ನಿನಗೆ ತರಲೆಂ ।
ದಾತುರದಿನಾನೈದಲೆನಗಾ ।
ಪಾತಕಿಯು ಲಕ್ಷ್ಮಣನು ತತ್ಕ್ಷಣವೀವಿಲಕ್ಷ್ಮ ॥ ೨೫॥

ಗೈದನೆನುತಳುತಿರ್ಪತಂಗಿಯ ।
ನಾದರಿಸಿ ಖರನಿರದೆ ಬಲವನು ।
ಮೋದದಿಂ ಸಂವರಿಸಿ ಪೊಕ್ಕನು ಪಂಚವಟಿಯನ್ನು ॥
ಆದುದದ್ಭುತರಭಸ ಭೇರೀ ।
ನಾದ ಕಿವುಡೇಳಿಸಿತು ಜಗವನು ।
ಹೋದಕಿವಿಮೃಗಗಳದನುಜೆಯ ಕಡೆಯದಂಡೆನುತ ॥ ೨೬॥

ಅರಿದು ರಾಮನು ಲಕ್ಷ್ಮಣನೆ ನೀಂ ।
ಧರಣಿಜೆಯನೆಚ್ಚರದೆ ಕಾದಿರು ।
ತರಿವೆನಾನೀದುರುಳರನು ಬಿಡದೆನುತ ಬಿಲುಗೊಂಡು ॥
ಅರಿಗಳೇ ನೀವೆಮಗೆ ಕಾರಣ ।
ವರಿಯಬಾರದು ತನಗೆ ತವಸಿಗ ।
ಳಿರವನಾಂತೆವೆಮ್ಮೊಳಗೆ ವೈರವದೆಂತು ನಿಮಗಾಯ್ತು ॥೨೭॥

ದುರುಳೆಯೊರ್ವಳು ನಮ್ಮ ತರುಣಿಯ ।
ನಿರಪರಾಧೆಯ ಭಕ್ಷಿಸುವೆನೆಂ ।
ದೆರಗಲಬಲೆಯ ಕೊಲುವುದನುಚಿತವೆಂದು ನಾವರಿದು ॥
ಕೊರೆದೆವೈ ಕಿವಿಮೂಗುಗಳ ನೀ ।
ಧುರಕೆ ನೀವಿಂದೇತಕೈದಿದಿ ।
ರೊರೆವುದೆಮ್ಮಪರಾಧವೇನೆಂಬುದನು ನೀವೀಗ ॥೨೮॥

ದಂಡಕಾವನತಾಪಸರು ನಿ ।
ಮ್ಮಂಡಲೆಯ ಸೈರಿಸದೆ ತನ್ನನು ।
ಕಂಡು ಕೇಳಿದರಿತ್ತನಭಯವನಾಮಹಾಜನಕೆ ॥
ಪುಂಡಗೆನಿಪಸುರರನು ಮತ್ಕೋ ।
ದಂಡಕಾಹುತಿಯೀವೆನೆನುತಲಿ ।
ಕಂಡು ನಿಮ್ಮಾದಂಡಿಯನು ಹುರಿಗೊಳಿಸಿತಾವಚನ ॥೨೯॥

ಹೆಂಡಿರಾಸೆಯು ಮಕ್ಕಳಾಸೆಯು ।
ಕಂಡುಕೇಳಿದರಾಸೆ ನಿಮಗಿರೆ ।
ಖಂಡೆಯುದಮೇಲಾಣೆಯಿಡುವುದು ಸಜ್ಜನರ್ಕಳನು ॥
ಕಂಡೊಡೀದಿನವೊದಲು ನಿಮ್ಮಯ ।
ಮಂಡೆಗಳ ಬಾಗಿಸುತ ದೂರದೆ ।
ಕೆಂಡವನು ಕಂಡಂತೆ ಜಾರುವೆವೆಂದು ನೀವೀಗ ॥ ೩೦ ॥

ಅಲ್ಲದಿರ್ದೊಡೆ ನಿಮ್ಮನೀಗಳೆ ।
ಹುಲ್ಲುಮೆದೆಯನು ಕಿಚ್ಚು ಸುಡುವಂ ।
ತಿಲ್ಲೆ ನಿರ್ನಾಮರನು ಗೆಯ್ದಪೆನೆನಲು ರಾಘವನು ॥
ಕಲ್ಲಿನೊಳು ಮಳೆಗರೆದೊಡೇನದು ।
ಮೆಲ್ಲಿತಹುದೇ ರಾಮವಾಕ್ಯದ ।
ಬಲ್ಲವಿಕೆಯನು ಖುಲ್ಲರರಿವರೆ ಹಾಯ್ದರೊಗ್ಗಡಿಸಿ ॥ ೩೧ ॥

ದಾನವರು ಪದಿನಾಲ್ಕುಸಾವಿರ ।
ಮಾನುವಾಬಗೆಯೆಂತು ರಾಮನು ।
ತಾನದೊರ್ವನೆ ನಿಂತು ಕಲಕುವುದೆಂತು ಪಗೆಗಡಲ ॥
ಏನಗೈದಪನೆಂತು ಸೋಸುವ ।
ನೀನಿದಾನವ ನೋಳ್ಪೆವೆನ್ನುತ ।
ಲಾನಭೋಂಗಣದೊಳಗೆ ನೆರೆದರು ಶಕ್ರಮುಖಸುರರು ॥ ೩೨ ॥

ಧರೆಯು ಜನಕಿತ್ತಧಿಕಬಾಧೆಯ |
ಸುರರ ಸಂಕಟಗೊಳಿಸಿ ಧರ್ಮವ |
ಸರಕುಗೆಯ್ಯದೆ ಮೀರಿ ಸಲೆ ದುರ್ಮಾರ್ಗಪರರಾಗಿ ||
ನರಕಭೀತಿಯು ತೃಣಕೆ ಸಮವೆಂ |
ದರಿತು ನಡೆಯುವ ದುರುಳರಕ್ಕಸ |
ಗುರಿಗಳೀ ನಿರ್ಮ್ಮಾಯು ಪೂರ್ತಿಯನೊಂದಿತಿಂದಿನಲಿ ||೨೩||

ಎಂದು ಸರಳುಗಳಿಂದ ಸುಭಟರ |
ವೃಂದವೃಂದಗಳನ್ನು ಸದೆದಾ |
ಸ್ಯಂದನಂಗಳಕೂಡೆ ರಥಿಕರನಂದು ತರಿಯುತ್ತ ||
ಮುಂದೆ ಬಹಮದದಾನೆಗಳ ಬಲು |
ಸಂದಣಿಯನುರುಳಿಸುತಲಶ್ವಗ |
ಳೊಂದುಮಿಲ್ಲೆನೆ ಸವರಿ ಹುಡಿಗುಟ್ಟಿದನು ರಾಘವನು ||೨೪||

ದಿಟ್ಟರವರೊಳ್ಕೆಲರು ಸಮರದ |
ಜಟ್ಟಿಗಳು ಮುಂದೈದಿ ರಾಮನ |
ಗಟ್ಟಿಸಿದರಾಪರಿಘತೋಮರಕುಂತಖಡ್ಗದಲಿ ||
ಪೆಟ್ಟು ತಾಗಿತು ರೋಷವೇರಿತು |
ಹುಟ್ಟುಗುಟ್ಟುವೆನಿವರನೆನುತಲಿ |
ತೊಟ್ಟು ಗಾಂಧರ್ವಾಸ್ತ್ರವನು ಬಿಡದೆಚ್ಚನಾಭೂಪ ||೨೫||

ಕಕ್ಕಿದರು ನೆತ್ತರನು ಕೆಲಬರು ।
ಸೊಕ್ಕಿ ಮುಲಗಿದರಂದನೇಕರು ।
ಮಿಕ್ಕವರು ಬೆಕ್ಕಸವನಾಂತೋಡಿದರುಳಿದು ಕಳನ ॥
ತಿಕ್ಕಿಮುಕ್ಕಿತು ಸರಳು ಸಕಲರ ।
ನಕ್ಕಜವು ತಾನೆನುತ ದೂಷಣ ।
ನುಕ್ಕುಗಾರನು ಪೊಕ್ಕನಾಹವಕಂದು ಸಮತಳಿಸಿ ॥೩೬॥

ಸಿಡಿಲಿಗೆಣೆಯಹಸರಳ ಪೂಡುತ ।
ತಡೆದುಕೊಳ್ಳೆಂದೆಸೆಯಲದನಿ ।
ಕ್ಕಡಿಯಗೈಯುತ ರಾಮನಾತನ ಬಿಲ್ಲನೊಂದರಲಿ ॥
ಕಡಿದು ನಾಲ್ಕಂಬಿನಲಿ ಕುದುರೆಗ
ಳೊಡಲನಿರದೆಚ್ಚೊಂದುಶರದಲಿ ।
ಕೆಡಹಿ ಸೂತನ ಮೂರುಬಾಣದಿ ದೂಷಣನನೆಚ್ಚ ॥೩೭॥

ಉರವಣಿಸಿ ಕೈಯೊಡನೆ ಖಳತಾ ।
ನುರುಬಿದನು ತರುಬಿದನು ಪರಿಘದೊ ।
ಳೆರಗಿದನು ಹಗೆಹರಿದುದೀದಿನವೆನುತ ಬೊಬ್ಬಿರಿದು ।
ಸರಳ ಸುರಿದನು ರಾಮನೊಡನೆಯೆ ।
ತರಿದನಾತನ ಭುಜಗಳೆರಡನು ।
ಧರಣಿದೊಡಲನು ಬಿಡಲು ಬಿದ್ದನು ಗಿರಿವೊಲಾಖಳನು ॥೩೮॥

ಆಸಮಯದೊಳಗಂತರಿಕ್ಷದೆ ।
ವಾಸವನು ಮೊದಲಾದಸುರರು ।
ದ್ಭಾಸಿಸುವಗಳ ಚೆಲ್ಲಿದರು ರಾಘವನ ಸಿರಿಮುಡಿಗೆ ॥
ಈಸುವನು ನೋಡಿದನು ಮನದಲಿ ।
ಗಾಸಿಯಾಂತನು ತಮ್ಮನಳಿವಿಂ ।
ಗೈಸಲೇಎನುತೆದ್ದುಕೊಂಡನು ಧನುವನಾಖರನು ॥೩೯॥

ತಾಳುತಾಳ್ಳೈ ದೇವ ನಿನಗೀ ।
ಹಾಲುಹಸುಳೆಯು ಸಮನೆ ತನಗಿಂ ।
ದೂಳಿಗವ ಕೊಡು ನಿನ್ನಸೇನಾನಾಥನಾನಲ್ತೆ ॥
ಜಾಲಗೈಯದೆ ಕೊಲುವೆನೆನ್ನುತ ।
ಶೂಲವೊಂದರಿನಿಡಲು ತ್ರಿಶಿರನು ।
ಕೋಲುಗಳನಿರದದನೆ ಖಂಡಿಸುತಾಕಕುತ್ಸ್ಥಜನು ॥೪೦॥

ಬಡನೆ ಕವಲಂಬುಗಳ ಜೋಡಿಸಿ ।
ಬಿಡದೆ ತಲೆಗಳ ಮೂರಸಿಳುಹ ।
ಲ್ಕಡರಿ ನಭದೊಳ್ಕುಣಿದುಬಿದ್ದುವು ಖರನ ಸಮ್ಮುಖಕೆ ॥
ಕೆಡೆದತಲೆಗಳ ಕಂಡು ಕೋಪದೆ ।
ತಡೆಯದೆದ್ದನು ಕಾರ್ಮುಕವ ಜೇ ।
ವಡೆದು ರಾಮನಮುಂದೆ ಸುಳಿಸಿದನಮರರಿಪು ರಥವ ॥೪೧॥

ಎಲೆಲೊ ರಾಘುವ ನಿನ್ನ ಭುಜಬಲ ।
ದಳವನರಿಯದೆ ನಮ್ಮ ಕೆಣಕಿದೆ ।
ಕೆಲರಹುಲುರಕ್ಕಸರ ಕೊಂದಿಹ ಗರುವಗರಹೊಡೆದು ॥
ಸಲೆ ಪರಾಕ್ರಮಿಯೆನುತ ಜರೆತಿಹೆ ।
ನಿಲಿಸು ನಿನ್ನೀಕೊಬ್ಬನೀಗಳೆ ।
ಕಳುಹುವೆನು ಯಮಪುರಕೆ ನಿಲ್ಲೆಂದೊದರಿದನು ಖರನು ॥೪೦॥

ಆದುದಾಯಿತು ನೀನಳಿಯೆ ತವ ।
ಸೋದರಿಗೆ ಕಿವಿಮೂಗು ಬರ್ಪುವೆ ।
ಈದುರಾಗ್ರಹವೇಕೆ ನಿನ್ನೊಡನಿರ್ದಭಟರೆಲ್ಲ ॥
ಹೋದರಿದರಿಂದೆಂದು ಬಗೆಯುತೆ ।
ಕಾದುವಾಸೆಯನುಳಿದು ಬದುಕುವ ।
ಹಾದಿಯುರಸುವುದೊಳ್ಳಿತೆಂದನು ನಗುತ ದಾಶರಥಿ ॥೪೧॥

ಬರಿಯಖರನಲ್ಲಾನು ನಿನ್ನಯ ।
ಹರಣಜಳವನು ಪೀರ್ವದಾರುಣ ।
ಖರಕರನಲಾ ತಂಗಿಗೊದವಿದ ಮಾನಭಂಗವನು ।
ಹರಿದು ಕಳೆವುದಸಾಧ್ಯವೇ ನಿ ।
ನ್ನರಸಿಯಾ ಕಿವಿಮೂಗುಗಳನಾ ।
ನರಿದು ನಿನ್ನನು ಕೊಲುವೆ ನೋಡೆಂದೆಚ್ಚನಾಖರನು ॥೪೪॥

ಎಚ್ಚ ಕಣೆಗಳ ರಾಮನಾಗಳೆ ।
ಕೊಚ್ಚಿದನು ಬಳಿಕವನ ರಥವನು ।
ಮುಚ್ಚಿದನು ಕೆಂಗರಿಯು ಪೊಸಮಸೆವೆತ್ತಬಾಣದಲಿ ॥
ಕಿಚ್ಚನುಗುಳುವಶರಗಳಿಂ ಖರ ।
ನುಚ್ಚಗಲೊಡಲನು ನೊಂದು ದೇವನು ।
ನುಚ್ಚುನುರಿಯಾಗಿಸಿದನಾತನ ತೇರನಾಕ್ಷಣದೆ ॥೪೫॥

ಲೇಸುಲೇಸೈ ರಾಮ ಕದನದ ।
ವಾಸಿ ನಿನಗಿನಿತೇಕೆ ನಿಲಿಸೈ ।
ಯೀಸುಪರಿಯಂತರವು ಕಾಣದೆ ಮೋಸವ್ರೋದೆನಲಾ ॥
ಈಸಿಕೊಳ್ಳೆನ್ನೀಶರಂಗಳ ।
ಗಾಸಿಯೊಂದದೆ ನಿಂದೆಯಾದೊಡೆ ।
ಸಾಸಿ ನೀನೇ ಮೂರುಲೋಕದೊಳೆನುತ ತೇರುಳಿದು ॥೪೬॥

ಶರಗಳೋ ಕಡೆಗಾಲದಬುದಿಯ ।
ತೆರೆಗಳೋ ನಡುವಗಲದಿನಪನ ।
ಕರಗಳೋ ಎಂಬವ್ರೊಲು ಕರೆದನು ಶರವ ಸಾಸಿರವ ।
ಬರುವಬಾಣಂಗಳಿಗೆ ಭಾರಿಯ ।
ಸರಳನೆಸೆಯುತೆ ಕತ್ತರಿಸಿದನು ।
ಮರಳಿ ಮೊನೆಗಣೆಗಳನು ಬಿಟ್ಟನು ಬೇಗ ರಾಘವನು ॥೪೭॥

ಖರನ ಕರಧನು ಮುರಿದುಬಿದ್ದುದು ।
ಬೆರಗನಾನುತಲಾಖಳಾಧಮ ।
ನುರುವಗದೆಯಿಂದಪ್ಪಳಿಸಿದನು ದೂಷಣಾಂತಕನ ॥
ಕೆರಳಿ ಪಜ್ಜೆಯನೆಳೆದು ಪಿಂದಕೆ ।
ಭರದೊಳೈಂದಾಸ್ತ್ರದಲಿ ರಾಮನು ।
ಖರನ ಶೀರ್ಷವನಿಳುಹೆ ಪೊಗಳಿದರಭ್ರದಲಿ ಸುರರು ॥೪೮॥

ಅರಸಿ ಕಂಡಳು ತನ್ನರಮಣನ ।
ಧುರದಜಯುವನು ಬಾಜಿ ತಬ್ಬಿದ ।
ಳರಸ ನೊಂದ್ಯೆ ಪಾಪಿದನುಜರ ಕ್ಯೆಗಳಿಂದಕಟಾ ॥
ಧರೆಯ ಸಾಮ್ರಾಜ್ಯವನು ನೀಗು ।
ತ್ತುರುತರದ ವನವಾಸಕಷ್ಟದೊ ।
ಳಿರುವ ನಿನಗೀದುರುಳರೊಂದೆಡೆ ಹಿಂಸೆಗ್ಯೆವರಲಾ ॥ ॥೪೯॥

ಹರಿಯು ನೀಂ ನಿನಗೇಪರಿಯುಬೇ ।
ಸರಮುಮಿಲ್ಲಮೆನುತ್ತ ಲೋಕದೊ ।
ಳೊರೆವರಾಮಾತಿರಲಿ ನರನಾಗುದಯಿಸಿದ ಬಳಿಕ ॥
ಮೆರೆವಮಾಂಸದ ಮಜ್ಜೆಯೆಲುವಿನ ।
ಬೆರಕೆಯಿಂ ಬಿಗಿದಿರ್ಪತನುವಿದ ।
ನಿರಿಯೆ ನೋಯದೆ ಮುದವನಾಂಪ್ರದೆ ಎಂದಳಾಸುದತಿ ॥೫೦॥

ಅರಸಿ ನಿನ್ನಾಲಿಂಗನೆಯಸುಖ ।
ದೊರೆದೊಡೆನಗಿರದಾವಗಂ ತಾಂ ।
ಬರಲಿ ಬರ್ಪಾಕಷ್ಟವೆಲ್ಲವು ಕೊನೆಗೆ ಹಿತಕರವು ॥
ಅರಿಗಳಾಯುಧವೆನ್ನ ಘಾತಿಸಿ ।
ಕೊರಗಿಸುವುದೇ ನಿನ್ನ ಕೋಮಲ ।
ಕರತಲಸ್ಪರ್ಶಾಮೃತಾಸೇಚನೆಯು ಬಲವಿರಲು ॥೫೧॥

ರಾಮವಾಕ್ಯಾಮೃತದ ವೃಷ್ಟಿಗೆ ।
ಕೋಮಲಾಂಗಿಯು ಬಗೆನವಿಲು ಸು ।
ಪ್ರೇಮದಿಂ ನಲಿದಾಡೆ ಸಮಯವು ತಮಗಿದೆಂದೆನುತ ॥
ವ್ಯೋಮಚರರತ ಖರದೂಷಣಾದ್ಯರ ।
ಕ್ಷೇಮೆಯಡಗಿಸಿ ನಮ್ಮಸಲಹಿದ ।
ಭೀಮವಿಕ್ರಮ ಜಯಜಯೆಂದುದು ಬಂದು ಮುನಿನಿಕರ ॥೫೨॥

ಸುರಪನನು ಶರಭಂಗಮುನಿಪನ ।
ವರತಪೋವನಕಿಳಿಸಿ ಸಕಲರು ।
ಬೆರಸಿ ಯೋಚಿಸಿ ದುಷ್ಟನಿಗ್ರಹಕೋಸುಗವೆ ನಾವು ॥
ಅರಸ ನಿನ್ನನು ತಂದೆವಿಲ್ಲಿಗೆ ।
ದುರುಳರೀದಿನವಳಿದುಪೋದರು ।
ಪರಮಪುರುಷನೆ ಸೈರಿಸುವುದೆನೆ ರಾಮ ಮನ್ನಿಸಿದ ॥೫೩॥

ಅಂತು ಸಂಧಿ ೨ ಕ್ಕಂಪದ್ಯಂಗಳು ೧೦೫ ಕ್ಕಂಮಂಗಳಂ.

## ಮೂರನೆಯ ಸಂಧಿ

ಸೂಚನೆ॥ ದಶಮುಖನಕಂಪನನ ಮುಖದಿಂ ।
ದಸಮುಖರಮುಖರಳಿವನರಿದು ।
ಬ್ಬಸದಿ ಮಾರೀಚನಸಹಾಯದಿ ನವನಿಜೆಯನೊಯ್ದಂ ॥

---

ಖರನಮರಣವ ಕಂಡು ಲಂಕಾ ।
ಪುರಿಗಕಂಪನನೆಂಬರಾಕ್ಷಸ ।
ನಿರದೆ ಭರದಿಂದೋಡಿ ಕಾಣುತ ರಾವಣಾಸುರನ ॥
ಖರನೆಮೊದಲಾದಖಿಳದನುಜರು ।
ಧುರದೆ ಹತರಾದುದನು ಪೇಳ್ದಂ ।
ಧುರಜನಸ್ಥಾನದ ವಿನಾಶವನರುಹಿದನು ಬಳಿಕ ॥ ೧॥

ಕೇಳಿದೊಡನೆಯೆ ರೋಷವಹ್ನಿ ।
ಜ್ವಾಲೆಯುಂಗವಸುಡಲಕಾಲದೆ ।
ಕಾಲನೆಂತಾರಾಕ್ಷಸೇಂದ್ರರ ಸೋಂಕಲೆಳಸಿದನು ॥
ಕೋಳುಹೋದುದೆ ತನ್ನ ಪಾಳೆಯ ।
ಪೇಳು ತನ್ನನು ಗಣಿಸದದನುರೆ ।
ಪಾಳನೆಸಗಿದಖೂಳನಾವನು ಬೊಮ್ಮನೋ ಹರಿಯೋ ॥ ೨॥

ಎಂದು ಬೆಸಗೊಳುತಿರ್ಪದನುಜನ ।
ಮುಂದುಗಡೆಯೊಳ್ಬಂದು ಬಿದ್ದಳು ।
ಮಂದಿ ಬೆದರಲು ಮೂಕೊರತಿಯಾಕುಮತಿಕುಹಕಕೃತಿ ॥
ಇಂದಿದೇನಿದು ಬಿದ್ದುದೆನುತಲಿ ।
ಸಂದೆಗಂಬಡುತಾಗ ಕಂಡನು ।
ಸಂದಕಿವಿಮೂಗಿನ ಲತಾಂಗಿಯ ತನ್ನತಂಗಿಯನು ॥೩॥

ಏನಿದೇನಿದು ತಂಗಿ ತಾನೀ ।
ಹಾನಿಯಾರಿಂದಾಯ್ತು ನಿನಗೀ ।
ಮಾನಭಂಗವನೆಸಗಿದಾತನು ಜೀವದಿಂದಿಹನೆ ।
ಆನಪ್ರಂಸಕನಾವನೆಲ್ಲಿಹ ।
ನೇನುಕಾರಣವೆಂಬುದೆಲ್ಲವ ।
ನೀನುನನ್ನೊಡನುಸಿರು ಬೇಗದೊಳೆಂದು ಖಳನುಡಿದ ॥೪॥

ಅಣ್ಣ ನೀನಿದನೇಕೆ ಕೇಳುವೆ ।
ತಣ್ಣಗಾದುದು ದನುಜರೈಸಿರಿ ।
ನಿನ್ನವಂದಿಗರಿರಲು ರಾಕ್ಷಸಕುಲವು ವರ್ಧಿಪುದೆ ॥
ತನ್ನದೇಶವನಿತ್ತುಮೇಣು ।
ತ್ಪನ್ನವೇನಾದ್ಯಂತಜನಗಳಿ ।
ಗುನ್ನತಸ್ಥಿತಿಯೊದವಲೇನೇನಿಹುದುಸಾಧನವು ॥೫॥

ಎಂಬಿವನು ತಾಂ ಬಗೆಗೆ ತಾರದೆ ।
ದಂಭದಧಿಕಾರಿಗಳ ಮಾತನು ।
ನಂಬುತವರಂತಿರ್ಪ ನೃಪತಿಯು ರಾಜ್ಯಮುಳಿಯುವುದೇ ॥
ಕುಂಭಕುಚೆಯರಿಗೊಲಿದು ನೀನಲ ।
ರಂಬನಾಟದೆ ಹೊತ್ತುಕಳೆಯಲು ।
ಚುಂಬಿಸಳೆ ನಿನ್ನಿಳೆಯುನಪಜಯಲಕ್ಷ್ಮಿ ತಾನೊಲಿದು ॥೬॥

ಮೂಜಗವು ತಲ್ಲಣಿಸೆ ಸಕಲರ ।
ನಾಜಿಯಲಿ ಗೆದ್ದುದಕೆ ಫಲವೇ ।
ನಾಜನಸ್ಥಾನವಲೆ ವಿಜನಸ್ಥಾನವೆನಿಸಿದುದು ॥
ವ್ಯಾಜವಿಲ್ಲದೆ ತರಳರಿರ್ವರು ।
ರಾಜಸುತರದಸಿಂತೆಸಗಿದರು ।
ಸೋಜಿಗವು ನಿನಗರುಹದಿರ್ಪುದು ಬೇಹಿನವರಿದನು ॥೭॥

ಖರನ ಕೊಂದರು ದೂಷಣನ ಶಿರ ।
ವರಿದರಾತ್ರಿಶಿರನ ಸಿರಂಗಳ ।
ತರಿದರುಳಿದಾರಕ್ಕಸರ್ಕಳನೆಲ್ಲ ಸದೆಬಡಿದು ॥
ಸುರರಿಪುಕ್ಷಯಕೃತಿಗೆ ವಿಘ್ನೇ ।
ಶ್ವರನಪೂಜೆವೊಲೆನ್ನ ಭಂಗಿಸಿ ।
ತರಳೆಯನು ಕೊಲಲಾಗದೆಂಬಾಧರ್ಮದಿಂದುಳುಹಿ ॥೮॥

ಬಿಟ್ಟರೆನ್ನೊರ್ವಳನು ತಾಸಹ ।
ಕೆಟ್ಟಕೇಡಸದಾರಿಗೊರೆಯಲಿ ।
ಹುಟ್ಟ ನಿನ್ನೊಡನೆನ್ನಮಾನವು ಬಟ್ಟಬಯಲಾಯ್ತು ॥
ದಿಟ್ಟರೆನಿಪವರಟ್ಟಹಾಸವ ।
ನಿಷ್ಟೆನುತ ನಿರ್ಣಯಿಸಲಸದಳ ।
ನಿಟ್ಟಿಸಲ್ಕಿನಗಳಿವ ತರ್ಪರು ಕಟ್ಟಕಡೆಯೊಳಗೆ ॥೯॥

ನುಡಿಯು ಕೇಳ್ದೊಡನಿರದೆ ಕಿಡಿಗೊಂ ।
ಡೆಡೆಯು ರಕ್ಕಸಗಡಣದೆದೆ ಗಡ ।
ಗಡನೆ ನಡುಗಲ್ಕೆದ್ದು ಕಡುಗವ ಜಡಿದು ಜಳಪಿಸುತೆ ॥
ನುಡಿನುಡಿ ಸಹೋದರಿಯೆ ಮೃತ್ಯುವಿ ।
ನುಡಿಜೆರಗ ಜಾರಿಸಿದಕೊಬ್ಬಿನ ।
ಕಡುಹುಕಾರರದಾರು ತೊಡೆವೆನು ಬಾಳದಕ್ಕರವ ॥೧೦॥

ಎಲೆಲೊ ನರಗುರಿಗಳಿರ ನೀವೆ ।
ನ್ನಳವನರಿಯದೆ ಕೆಣಕಿ ಕೆಟ್ಟರಿ ।
ಫಲವನುಣ್ಣಿರಿ ಯೆನುತಲಸುರಾಧಿಪನು ಲಟಕಟಿಸೆ ॥
ಬಲುಭುಜನ ತಬ್ಬಿದಳು ತಡೆದಳು ।
ಚಲದಪರಿಯಿದು ಸಾಗದವರೊಳು ।
ನೆಲದ ಹುಲುನರರೆಂದು ಭಾವಿಸಬೇಡ ನೀನವರ ॥೧೧॥

ಕೇಳಿ ಬಲ್ಲೈ ನೀನಯೋಧ್ಯೆಯ ।
ನಾಳುತಿರ್ದನ ದಶರಥೇಂದ್ರನ ।
ಮೇಲೆನಿಪ ತನುಜಾತರೆಸೆವರು ರಾಮಲಕ್ಷ್ಮಣರು ॥
ನೀಳವಾಗಿಹ ತೋಳು ಮೇಣ್ವಿ ।
ಶಾಲವಾಗಿಹಚಕ್ಷು ವಲ್ಕಲ ।
ಚೇಲವಂಗಜರೂಪು ಶೋಭಾಕರವು ರಾಮನಿಗೆ ॥೧೨॥

ಧನುವ ಧರಿಯಿಸಿ ಕರದೊಳಾವಗ ।
ಮನಲಕೀಲವನುಗುಳ್ವಬಾಣವ ।
ನನುಗೊಳಿಸುತೆಚ್ಚರದೊಳಿರ್ಪನು ಶೂರರಘುವೀರ ॥
ಅನಿಮಿಷರಿಗೀಕ್ಷಿಸುವೊಡರಿದಾ ।
ಅನುಪಮನ ಕೈಚಳಕಮಿಷುಗಳ ।
ನೆನಿತುವೇಗದೆ ತೆಗೆವಪೂಡುವನಿಸುವನೆಂಬುದಿದು ॥೧೩॥

ಏನನುಜ್ಞೆಯನೀವನಣ್ಣನು ।
ತಾನದೆಳ್ಳನಿತುವನು ಮೀರದೆ ।
ಮಾನಿಲಕ್ಷ್ಮಣನವನನೇ ನೆಳಲಂತೆ ಪೊದ್ದಿಹನು ॥
ಮೀನಕೇತನನರಸಿಯನು ನುಸಿ ।
ಗಾಣುವಾಕಡುರೂಪನೊಂದಿದ ।
ಮಾನಿನೀಮಣಿಯೊರ್ವಳಿರ್ಪಳು ರಾಣಿ ರಾಮಂಗೆ ॥೧೪॥

ಇಂದುವನು ನಗುತಿಹುದು ವದನವು ।
ಬಂದುಗೆಯನಾತುಟಿಯು ಪಳಿವುದು ।
ಮಂದಗತಿಗಳುಕುತ್ತ ಮದಗಜವುಡವಿಗೈದಿದುವು ॥
ಸುಂದರಾಂಗಿಯ ನೇತ್ರಯುಗಮರ ।
ವಿಂದವನು ಸೋಲಿಪುದು ಸಂಪಗೆ ।
ಯಂದವನು ಕಡೆಗಣಿಸಿ ಮೆರೆವುದು ಲಲಿತನಾಸಿಕವು ॥೧೫॥

ಜನಕಭೂಪನ ಸುತೆಯು ಸೀತೆಯು ।
ಘನತರಮೆನಿಪ್ಪಾಸ್ವಯಂವರ ।
ದನುವನಾಲಿಸಿ ಪೋಗಿ ಮಿಥಿಲೆಗೆ ನೀನು ಪೂರ್ವದಲಿ ॥
ಧನುವನೆತ್ತದೆ ಭಗ್ನಮಾನಸ ।
ನೆನಿಸಿ ಹಿಂದಿರುಗಿದೆಗಡಾ ತ ।
ದ್ವನಿತೆಯೇ ತಾನಾಗಿಯೆಮ್ಮೆಡೆಗಿಂದು ಬಂದಿಹಳು ॥೧೬॥

ನಿನ್ನರೂಪಿಂಗವಳ ಚೆಲುವಿಕೆ ।
ಯುನ್ನ ನಾನೊರೆಯಿಕ್ಕಿ ಸಮನೆಂ ।
ದುನ್ನತೋತ್ಸವದಿಂದಲವಳಸು ಪಿಡಿಯಲನುವಾಗೆ ॥
ಕುನ್ನಿ ಫಡ ಹೋಗೆನುತ ಲಕ್ಷ್ಮಣ ।
ತನ್ನ ಸರಳಿಂದೆನ್ನನೀಪರಿ ।
ಬನ್ನಬಡಿಸಿದನಣ್ಣ ನಿನ್ನಿಂದೆನಗೆ ಪರಿಭವವು ॥೧೭॥

ಅಸುರದ ಸಕಲಾಯುಧಂಗಳ ।
ಸಾಸವಿವರೊಳ್ನಡೆಯದೆಂತುಟು ।
ವೇಸವನು ಮರೆಯಿಸುತೆ ಮುನಿಗಳತೆರದೆ ಬಂದಿಹರೊ ॥
ಲೇಸರಿದು ನೀನಂತುಟವರನು ।
ವೋೀಸದಿಂದಲೆ ನಾಶಪಡಿಸುವ ।
ದೇಸಿಯೊಂದಿಹುದದನು ತಿಳಿಪುವೆ ಕೇಳು ಕೃಪೆದಾಳು ॥೧೮॥

ತರುಣಿಯಾ ನಡೆನುಡಿಗಳಿಗೆ ರಘು ।
ವರನು ಮೆಚ್ಚಿಹನವನ ಸುರುಚಿರ ।
ತರಗುಣಂಗಳಿಗಾಕೆ ಸೋತ್ತಿಹಳಿರ್ಪರೊಂದೆನಲು ॥
ಮೆರೆಯುವೆಣೆವಕ್ಕಿಗಳೊ ತಾವೆನ ।
ಲೆರಕಗೊಂಡಿಹರದರಿನವನಾ ।
ಸರಸಿಜಾಕ್ಷಿಯು ಜತೆಯು ತಪ್ಪಲು ಕೊರಗಿ ಸಾಯುವನು ॥೧೯॥

ಪೇಳುವೆನು ನಾನೊಂದುಪಾಯುವ ।
ಕೇಳು ಮಾರೀಚನನು ಮಾವನ ।
ನೋಲಗಿಸಿಯೊಲಿಸುತ್ತ ಕಾರ್ಯವ ಸಾಧಿಪುದು ಮತವು ॥
ತಾಳಿ ಹೊಮ್ಮಿಗವರಿಜನವನಾ ।
ಬಾಲೆಯಿದಿರೊಳ್ಸುಳಿಯಲಾಕೆಯು ।
ತಾಳುತಾಸೆಯನದನು ಪಿಡಿಯೆನುತರಸನನು ಕಾಡೆ ॥೨೦॥

ಅಸಿಯುಳಿಷ್ಟವ ಸಲಿಸಬೇಕೆನು |
ತಸನುಶೂರನು ಪಿಡಿಯಲೈತರ |
ಲೆಸೆದು ಬಳಿಯಲಿ ಸಿಕ್ಕಿತೆನಲುಸವಸದಿ ಲಂಘಿಸುತ ||
ಸಸಿನೆ ಮುಂದಕೆ ಪೌರುತಂತಂ |
ತಸದ್ರೃಶದ ಬೆಡಗಿಂದಲುರುಸಾ |
ಹಸದೊಳವನನು ಸೆಳೆದು ದೂರಕೆ ಸಾರ್ದು ತಾನಿರದೆ ||೨೧||

ತಮ್ಮಲಕ್ಷ್ಮಣ ಸೀತೆ ಹಾ ಎಂ |
ದುಮ್ಮಳಿಸುತಾರಾಮನಂದದೊ|
ಳೊಮ್ಮೆ ಕೂಗಲು ಕೇಳಿ ಲಕ್ಷ್ಮಣನಾಂತು ಕಳವಳವ ||
ಹಮ್ಮದಂಗೊಳುತೆದ್ದು ರಾಮನ |
ನೆಮ್ಮದಿಗೆ ಭಯವೊದವಿತೆನ್ನುತ |
ಗಮ್ಮನಾದನಿವಿಡಿದು ತಾನಲ್ಲಿಂದ ತೆರಳುವನು ||೨೨||

ಕಡುಭರದಿ ನೀಂ ಯತಿಯು ವೇಷವ |
ಗಡಣಿಸುತಲಾಶ್ರಮವ ಪೊಕ್ಕಾ |
ಮಡದಿಯನು ಪಿಡಿತಪ್ಪ್ರದುಚಿತವಿದೆಂದು ಖಳ ನುಡಿಯೆ ||
ಬಡನೆ ತಂಗಿಯು ತಬ್ಬಿ ಮುದ್ದಿ |
ಟ್ಟಡಸಿದಾಪತ್ತಿನಲಿ ತನ್ನನು |
ಬಿಡದೆ ಸಲಹಿದೆ ತಾಯೆಯೆಂದೆನುತೆದ್ದನಸುರಪತಿ ||೨೩||

ಆಗಳಾಜ್ಞೆಯನಿತ್ತು ರಥವನು ।
ಬೇಗ ತರಿಸುತ್ತಡರಿದನು ಲೇ ।
ಸಾಗಿ ದುರ್ವೃತ್ತಿಯನು ದೂರೀಕರಿಸಿ ವಿಪಿನದಲಿ ॥
ಯೋಗಮಾರ್ಗದೊಳಿರ್ದು ಲೌಕಿಕ ।
ರಾಗವೆಲ್ಲವ ನೀಗಿ ಶಿವಸಂ ।
ಯೋಗಮಾನಸನಾದ ಮಾರೀಚನನು ತಾಂ ಸೇರಿ ॥೨೪॥

ರೋಗನುಡಿಸಿಹುದೆನಗೆ ನೀಂ ನೆರ ।
ವಾಗಿ ತಕ್ಕುದೆನಿಪ್ಪುದುದ್ಧನು ।
ಬೇಗನಿತ್ತೋವೆಂದು ದೈನ್ಯವ ಬೀರಿ ಯಾಚಿಸಲು ॥
ಆಗವೋದಿತತತ್ವಪರನೀ ।
ನಾಗ್ರುತೆನ್ನಿಂದಲ್ಪಮತಿಯಿಂ ।
ದೀಗಳೇನನು ಪಡೆಯಲ್ಕೈದಿದೆ ಯೆಂದನಾದನುಜ ॥೨೫॥

ಪೇಳಲೇನನು ಮಾವ ರಕ್ಕಸ ।
ರೇಳಿಗೆಗೆ ಕಡುಭಂಗವೊದವಿತು ।
ಕೀಳುತರದಾಹುಲುನರರು ಬಲುಗೂಳಿಯಾದರಲಾ ॥
ಕೇಳಿದೊಡೆ ನಮ್ಮವರ ವಿಧಿಯನು ।
ಬಾಳಬಹುದೇ ಧರೆಯೊಳಗೆ ಬ ।
ಲ್ಲಾಳತನ ತಾನೆತ್ತಲಡಗಿತೊ ದಾನವರಕುಲದ ॥೨೬॥

ಬಂದಿಹರು ಸಾಕೇತಪುರವರ ।
ದಿಂದ ಭೂಪತಿದಶರಥೇಂದ್ರನ ।
ನಂದನರುಗಡ ರಾಮಲಕ್ಷ್ಮಣರೆಂಬಬಾಲಕರು ॥
ಚಂದಿರಾನನೆ ಸೀತೆ ಜತೆಯಲಿ ।
ಬಂದಿಹಳು ಗಡ ತರಳರವದಿರು ।
ಹೊಂದಿ ಮುನಿವೇಷವನು ಚರಿಪರುಗಡ ತಪೋವನದೆ ॥ ೨೭ ॥

ಅಲ್ಲಿಕಾವಲಿಗಿರಿಸಿದೆಮ್ಮಯ ।
ಬಲ್ಲಿದರು ಪದಿನಾಲ್ಕುಸಾಸಿರ ।
ಮಲ್ಲರೆನಿಸಿದಭಟರ ನಿಷ್ಕಾರಣದೆ ಕೊಲ್ಲುತಲಿ ॥
ಇಲ್ಲ ಸಮರಾಂಗಣದೆ ಸಮಭಟ ।
ರೆಲ್ಲಿಯುಂ ಖರದೂಷಣರಿಗೆಂ ।
ದೆಲ್ಲರಾಡುತ್ತಿರ್ದ್ದತನ್ನಯ ಸೋದರರ ಮುರಿದು ॥ ೨೮ ॥

ಲಲನೆಯರ ಸೌಭಾಗ್ಯಲಕ್ಷ್ಮಿಯ ।
ಚಲುವಿನರಗಿಳಿಶೂರ್ಪಣಖೆಯನು ।
ಕಲಹವಿಲ್ಲದೆಮೂಗುಕಿವಿಗಳನರಿದುಕಳುಹುತಲಿ
ನೆಲದೊಳೆನಗಾಚಂದ್ರಸೂರ್ಯರು ।
ನೆಲಸಿರುವಪರಿಯಂತ ಕೊರತೆಯ ।
ನಿಲಿಸಿದರು ಪಾಪಿಗಳು ತಮ್ಮಯ ಕೊಬ್ಬಿನುಬ್ಬಿನಲಿ ॥ ೨೯ ॥

ಮಾನ ನಿನ್ನಸಹಾಯಮಿರಲೀ ।
ರಾವಣಂಗಿದಿರಾರು ಲೋಕದೊ ।
ಳಾವಘನಪೌರುಷರು ಮಾನಿಸಪುಳುಗಳೆಂಬವರು ॥
ಸಾವು ಸಮನಿಸದಂತೆ ಸೀತಾ ।
ದೇವಿಯನು ಹಾರಿಸುವುಪಾಯವ ।
ಭಾವಿಸುತ ಮನದೊಳಗೆ ನಿನ್ನಯಬಳಿಗೆ ಬಂದಿಹೆನು ॥೨೦॥

ಆಲಿಸೈ ಮುನ್ನಾಸ್ವಯಂವರ ।
ಕಾಲದಲಿ ನೆರೆದಿರ್ದಪೃಥ್ವೀ ।
ಪಾಲರಿದಿರೊಳು ಹೆದೆಯನೇರಿಸುವಾಗ ಬಿಲ್ಲುದಿಗೆ ॥
ಲೋಲಲೋಚನೆಯಂದಚಂದದ ।
ಮೇಲೆ ತನ್ನಯಮನವು ಮೋಹಿಸಿ ।
ಕಾಲು ಜಾರಿದೊಡೆನ್ನನೀಕ್ಷಿಸಿ ನಕ್ಕಳೇಡಿಸುತೆ ॥೨೧॥

ಇಂದು ತಂಗಿಗೆ ಮಾನಭಂಗವು ।
ಬಂದುದೀಕೆಯದೆಸೆಯಿನಲ್ಲದೆ ।
ಸುಂದರಾಂಗಿಯನೊಂದಬೇಕೆಂಬಾಸೆ ತನಗಿಹುದು ॥
ಬಂದು ಮೂರಂತಿರಲಿ ಮಧ್ಯದ ।
ಕುಂದಿನಿಂದಲಿ ನಮ್ಮಕುಲವೇ ।
ಬೆಂದುದಿದಕಿಂದವಳನಪಹರಿಸುವುದೆ ಮುಯ್ಯಿತ್ತೆ ॥೨೨॥

ಅಸುರಮುನಿ ಕೇಳಿದಕುಪಾಯವ ।
ನುಸಿರುವೆನು ನೀನಲ್ಲದಿತರರಿ ।
ಗಸದಳವಿದೆಂದರಿದು ಯೋಚಿಸಿ ಬಂದೆನೊಲವಿನಲಿ ॥
ಹುಸಿಯದಂದದೊಳೀಯಭೀಷ್ಟವ ।
ನೆಸಗುತೆನ್ನನು ಸಲಹು ನೀನೆಂ ।
ದಸುರಪತಿ ಕುಲನಾಶಮಂತ್ರವನುಸಿರಿದನು ಖಳಗೆ ॥ ೩೩ ॥

ಬೆಚ್ಚಿದನು ಮಾರೀಚನಂದಿನ ।
ನಚ್ಚು ನೆನಪಿಗೆಬರಲು ರಾಮನ ॥
ಬಚ್ಚಣೆಯಬಾಣವದು ನೆಟ್ಟಂತಾಗೆ ಹೃದಯದಲಿ ॥
ನುಚ್ಚುನೂರಾಯ್ತೆದೆಯು ಬಳಿಕಿರ ।
ದೆಚ್ಚರೊಂದುತೆ ರಾಮನೆಂಬಾ ।
ಕಿಚ್ಚು ಪಬ್ಬುತೆ ದನುಜವಂಶವ ಸುಟ್ಟವೊಲು ಬಗೆದು ॥ ೩೪ ॥

ಬಂದನೇನೈ ದಾನವಾರಿಯು ।
ತಂದನೇನೈ ಮರಣದೋಲೆಯ ।
ನಂದಿತೇನೈ ದನುಜರೈಸಿರಿಯೆಂಬಪೆಜ್ಜೊಡರು ॥
ಕಂದ ನಿನ್ನೀಬುದ್ಧಿಗಿಂದಿದ ।
ತಂದು ಚಾಚಿದಳೇನು ಪಾಪಿನಿ ।
ಮಂದಮತಿಚಲಗಾತಿ ಖಲರತಿಯಸತಿಮೂಕೊರತಿ ॥ ೩೫ ॥

ರೂಪವತಿ ತಾನೆನ್ನುತವರೊಳು ।
ಪಾಪಕೃತ್ಯಕ್ಕೆಳಸಲಿಂತುವಿ ।
ರೂಪವೆಸಗಿದರಿವಳಿಗಲ್ಲದೆ ಬೇರೆ ಕಾಣಿಸದು ॥
ಚಾಪಲದೆ ಪುರುಷರೊಳು ಕಪಟಾ ।
ಟೋಪವನು ನೆರೆತೋರ್ಪ ಪೆಣ್ಗಳಿ ।
ಗೀಪರಿಯು ಮದ್ದರೆದೊಡಲ್ಲದೆ ಬುದ್ಧಿ ತಾಂ ಬಹುದೆ ॥ ೩೬ ॥

ರಾಮಲಕ್ಷ್ಮಣರಾರು ತಾನಾ ।
ಭೂಮಿಸುತೆಯಾರೆಂಬುದನು ನೀಂ ।
ಕಾಮವಶದಿಂ ಮನಕೆ ತಾರದೆ ಕೆಣಕಿ ಕೆಡಬೇಡ ॥
ಈ ಮಹೀಭಾರವನು ತಗ್ಗಿಪ ।
ನೇಮದಿಂದಿವರುದಯಿಸಿರ್ಪ್ಪರ್ ।
ದ್ದಾಮಮಹಿಮಽನಾದಿಪುರುಷನನಂತಲಕ್ಷ್ಮಿಯರು ॥ ೩೭ ॥

ಖಲರ ಮಲಿನಾಚರಣೆಗಳು ಭೂ ।
ತಲದೆ ವೃದ್ಧಿಯನೊಂದಲಾಗಳೆ ।
ಕೆಲಕೆ ನೂಕುತೆ ಮತ್ತೆ ಸನ್ಮಾರ್ಗವನು ನಿಲಿಸಲ್ಕೆ ॥
ಜಲಜನಾಭನು ಹಲವುವೇಳೆಯೊ ।
ಳೊಲಿದು ಧರಣಿಯೊಳುದಿಸಿ ದುರುಳರ ।
ಕೊಲುವನೆಂಬರಿವೆತ್ತಲಡಗಿತು ನಿನ್ನ ಚಿತ್ತದಲಿ ॥ ೩೮ ॥

ಮಗುವು ರಾಘುವನೆಂದುಪೇಕ್ಷಿಸಿ ।
ವಿಗಡವಿಶ್ವಾಮಿತ್ರನಾಶ್ರಮ ।
ವುಗುತೆ ಪಿಂತೆ ಸುಬಾಹುಮಾನುಂ ಕಾಳಗವನೆಸಗೆ ॥
ಬಗೆಯುತೆಮ್ಮನು ತೃಣದವೋಲ್ಕಿರು ।
ನಗೆಯ ಪಸರಿಸುತಂಬೆರಡನಿಡ ।
ಲಗಲಿತಸು ತಮ್ಮನಿಗೆ ಕೆಡೆದೆನು ನಾನು ಕಡಲೊಳಗೆ ॥೩೯॥

ಇರಲು ನಿಜರೂಪಿನಲಿ ರಾಘುವ ।
ಶರಕೆ ತುತ್ತಹೆನೆಂಬಭಯದಿಂ ।
ದುರುತಪಸ್ವಿಯ ಚರ್ಯೆಯಿಂದೀಬನದೆ ಜೀವಿಪೆನು ॥
ಅರಿಯಲಾಖರದೂಷಣಾದ್ಯರು ।
ಕಿರಿಯರೇ ಬಲದೊಳಗೆ ನೀನಿದ ।
ನರಿದರಿದು ಪೋಲ್ವಾಯ್ಯುದು ಜೆತವೆ ತಾಟಕಾರಿಯೊಳು ॥೪೦॥

ಕಾಮಶರಕೀಡಾಗಿ ಸೀತಾ ।
ಭಾಮಿನಿಯನುರೆ ಬಯಸಿ ಸುಜನ ।
ಪ್ರೇಮವಿರಹಿತನಾಗಿ ಧರ್ಮವಿದೂರನೆಂದೆನಿಸೆ ॥
ಭೂಮಿ ಹೇಸದೆ ಕೀರ್ತಿ ಮಾಸದೆ ।
ನಾಮವಳಿಯದೆ ಮೃತ್ಯುವೆಳೆಯದೆ ।
ರಾಮಬಾಣವು ನಿನ್ನಸದೆಯದೆ ಬಿಡುವುದೇಬರಿದೆ ॥೪೧॥

ಬೇಡಬೇಡಿಂತಹಕುಚೇಷ್ಟೆಯು ।
ಮಾಡದಿರು ರಘುರಾಮನೊಡನಿಂ ।
ತಾಡಿ ಕೆಟ್ಟರು ಮುನ್ನ ಹಲಬರು ದುರುಳತನದಿಂದ ॥
ನೋಡುನೋಡುತ ಕೊಲುವವಾರಿಯು ।
ದಾಡೆಯುಲುಗುವರುಂಟೆ ನಿನ್ನನು ।
ಬೇಡಿಕೊಂಬೆನು ಮರಳು ಪುರಕೆಂದಸುರಮುನಿ ನುಡಿದ ॥೪೨॥

ರೋಗಿಗೌಷಧ ಸೇರದಂದದಿ ।

ಭೋಗಿಗುರೆ ತಪ ರುಚಿಸದಂದದಿ ।
ಯೋಗಿಗಾಸಂಸಾರಲಂಪಟ ಸೊಗಸದಂದದಲಿ ॥
ತಾಗಿದೊಡನೀಮಾತು ಕಿವಿಗಳ ।
ಗಾಗ ರೋಷಜ್ವಾಲೆ ಕಿಡಿಯಿಡೆ ।
ಬೇಗನೇಳುತ ಕಡುಗಗೊಂಡನು ಜಡಿದು ರಾವಣನು ॥೪೩॥

ಏನಿದೆಲವೋ ನಿನ್ನನುಡಿಗಳು ।
ಭಾನುವಿನ ಮುಂದಂಧಕಾರವೆ ।
ಶ್ಯೇನನಿದಿರೊಳು ಪಾರಿವಾಳವು ಸುಳದು ಜೀವಿಪ್ಪುದೆ ॥
ಜೇನುಹುಟ್ಟನೊಳೆರಗಿ ನೊಣವೆ ।
ತ್ರಾನುಮುಳಿಯುಲುಬಹುದೆ ತನಗಾ ।
ಮಾನವರ ಪಡಿಗಟ ಮುಡಿವೆನು ನಿಲಿಸು ನಾಲಗೆಯ ॥೪೪॥



ವೃದ್ಧನೆನ್ನುತ ನಿನ್ನಬಳಿಗಾಂ ।
ಪೊದ್ದಿದುದಕಲೆನಾಲಗೆಯು ಮೊಳ ।
ದುದ್ದ ಸಿಗುರಿತು ತನ್ನನಾರೆಂದರಿಯದೀಪರಿಯ ॥
ಬುದ್ಧಿವಾದವ ಪೇಳತೊಡಗಿದೆ ।
ಕ್ರುದ್ಧನಾಗುತ ನಿಂದೆನಾದೊಡೆ ।
ಯುದ್ಧರಂಗದೆ ಕಾಲರುದ್ರನು ಸದ್ದುದೋರುವನೆ ॥೪೫॥

ಇರಲಿ ನಿನ್ನಯ ಸಲುಬು ತನ್ನಯ ।
ಬರವಿಗುತ್ತರವೇನು ಸೀತಾ ।
ಹರಿಣರೂಪವನಾಂತು ಬರ್ಪೆಯೊ ಬಾರೆಯೋ ಪೇಳು ॥
ಹರಣದಾಸೆಯುದಿದೊರ್ಡೆನ್ನೊಡ ।
ನಿರದೆ ಬರ್ಪುದು ತಪ್ಪಿದೊಡೆ ನಿ ।
ನ್ನುರಕೆ ಚಾಚುವೆ ಚಂದ್ರಹಾಸವನೆನುತ ಗರ್ಜಿಸಿದ ॥೪೬॥

ಕೇಳದೊಡನೆಯೆ ಭಯಪಯೋಧಿಯೊ ।
ಳಾಳದನು ಮೈಬೆಮರಿತಾಕ್ಷಣ ।
ಖೂಳನಿವನೊರೆದಂತೆ ನಡೆಸದೆ ಮಾಣನೆಂದೆನುತ ॥
ಕಾಲವೊದವಿತು ತನಗಮೀಕೇ ।
ಡಾಳಿಯಿಂದಸು ತೊಲಗದಿರದು ಕೃ ।
ಪಾಳುರಾಘುವನಸ್ತ್ರಕಿದ ಬಲಿಯಾಗಲಪ್ಪಿಪೆನು ॥೪೭॥

ದೂರಕೆಳೆದೊಯ್ಯುತ್ತಲವನನು ।
ಮೀರಿ ದಣಿಸಿದೊಡಿರದೆ ಕೋಪಿಸಿ ।
ಕ್ರೂರಲಗಿನಿಂದೆನ್ನ ಸಂಹರಿಸುವನು ರಾಘುವನು ॥
ಧಾರಿಣಿಯೊಳೀಸ್ಥೈಪು ಮತ್ತಿ ।
ನ್ನಾರಿಗಾದೊಡಮುಂಟೆ ಮುಕ್ತಿಯು ।
ನಾರಿ ಸೇರುವಳೆನಗೆ ತಾನೇ ಧನ್ಯನಹೆನೆಂದ ॥೪೮॥

ಅಳುಕಲೇಕಿನ್ನಿದಕೆನುತ ಮನ ।
ದೊಳಗೆ ನಿರ್ಧರಿಸುತ್ತೆದನುಜನು ।
ವಿಳಯರುದ್ರನತೆರದೆ ನಿಂದಿಹರಾವಣನ ನೋಡಿ ॥
ಎಲವೊಪಾಪಿಯೆ ನನ್ನನುಡಿಗಳು ।
ಫಲಿಸದಾದುವು ನಿನ್ನಚಿತ್ತದ ।
ಚಲವಬಿಡೆ ನೀನಾದುದಾಗಲಿ ಬರ್ಪೆನೆಂದೊರೆದು ॥೪೯॥

ತೆರಳುವಾಮಾರೀಚನನು ಖಳ ।
ರರಸನಾಗಳೆ ಕರೆದು ತನಗಿ ।
ನ್ನರಿಯು ಗೆಲುವುದು ಸುಲಭವಾದುದು ಮಾವರಥವೇರು ॥
ತರುಣಿಯನು ಕರೆತಂದು ಸಗ್ಗದ ।
ಪರಮಸೌಖ್ಯವನೊಂದೆನುತ್ತಲಿ ।
ಪರಸುತೆನ್ನೊಡನಿಂದು ಬಾರೈ ರಾಮನಾಶ್ರಮಕೆ ॥ ॥೫೦॥

ಬರೆಯುತೀಪರಿ ರಥವನೇರಿಸಿ ।
ಸುರವಿರೋಧಿಯುಮನದಭೀಷ್ಟವ ।
ಭರದೆ ಪಡೆಯುವೆನೆಂಬಸಂಭ್ರಮದಿಂದ ಪೊರಮಡುತ ॥
ಪರಿಪರಿಯೊಳೊಪ್ಪುತಿಹಪಟ್ಟಣ ।
ಗಿರಿವನಂಗಳ ದುರ್ಗನದಿಗಳ ।
ನಿರದೆ ಕಳೆಯುತ ದಂಡಕಾವನಮಧ್ಯದೇಶವನು ॥ ॥ ೫೧ ॥

ಸೇರಿ ಕದಳೀವನದ ಮಧ್ಯದೆ ।
ತೋರುತಿರ್ಪಾಶ್ರಮವನೊಂದನು ।
ದೂರದಿಂದಲೆ ಕಾಣುತಿದು ಪೊಸತಾಗಿತೋರುತಿದೆ ।
ತೇರನಿಲ್ಲಿಯೆ ನಿಲ್ಲಿಸೆಂದಾ ।
ಸಾರಥಿಗೆ ಸೂಚಿಸುತಲಿಳಿದನು ।
ನಾರುಮಡಿಯನು ಧರಿಸಿ ಮಾವನೊಳೆಂದನಸುರೇಂದ್ರ ॥ ೫೨ ॥

ಮಾವ ಕೇಳಿಯಾಶ್ರಮವು ಪರಿ ।
ಭಾವಿಸಲು ರಾಮನದು ನೀನೀ ।
ತಾವಿನಲಿ ನಿನ್ನಖಿಲಸಾಮರ್ಥ್ಯವನು ತೋರಿಸುತ ॥
ಮೇವಿಗೆಳೆಸಿದಹೊಮ್ಮಿಗವೊ ಎಂ ।
ಬಾವಿಧದಿ ಮೋಹವನೆ ಪುಟ್ಟಿಸಿ ।
ಭೂವಲಯಕದ್ಭುತವ ತೋರುತ್ತೊಲಿಸು ಜಾನಕಿಯ ॥ ೫೩ ॥

ಬಳಕ ಮಿಕ್ಕಿನಕಾರ್ಯವೆಲ್ಲವು ।
ಸುಲಭವಾಗಿಯೆ ಸಿದ್ಧಿಸುವುದೈ ।
ಬಲುಹಿಸಿಂ ಕರವೆಳೆಯೆ ಕಾಯುವು ತಾನೆ ಬಪ್ಪುದಲಾ ॥
ಪಲವುಬಗೆಯನು ಮನಕೆ ತಾರದೆ ।
ಚೆಲುವರೂವನು ಬೇಗ ತಾಳೆಂ ।
ಬುಲಿವು ಹಿಂಚೆಕು ಮುಂಚೆತಂತಹ ಪುಲ್ಲೆಯುಪವನಕೆ ॥ ೫೪ ॥

ಸುಳಿದುದದು ತಾನಿತ್ತಲತ್ತಲು ।
ಮೆಲೆವನೆಯು ಸರಿಸದಲಿ ತೋರುತ ।
ಕೆಲಕೆಸಾರುತ ಬಳಕವಾಗುಳ್ಳೈದುತ್ತ ನಿಲ್ಲುತಲಿ ॥
ಹಲವುಬಣ್ಣದೊಳ್ಳೈದೆರಂಜಿಸು ।
ತಲುಗದಕ್ಷಿಗಳಿಂದನೋಡುತ ।
ನಲಿಯುತೊಪ್ಪುವ ಸೊಬಗಬೀರಿತುಕನಕಮೃಗವಂದು ॥ ೫೫ ॥

ಎನುತತರುಗಳೊಳರಸಿ ಪುಷ್ಪವ ।
ಮನಕೆ ಬಂದುದ ತಿರಿದು ಮಡಿಲಲಿ ।
ಜನಕನಾತ್ಮಜೆ ತುಂಬುತೆಲೆವನೆಯಿದಿರಿನುಪವನದೆ ॥
ಮಿನುಗುತಿಹಕಾಂಚನಮಯಾಂಗದ ।
ಘನಮನೋಹರವಾದ ರೂಪಿಂ ।
ದನುಪಮಾನಮಿದೆನಿಪಮೃಗವನು ಕಂಡು ಮೋಹಿಸುತ ॥ ೫೬ ॥

ಏನಿದೆತ್ತಣಿನ್ನೈದಿತೆರಳೆಯು |
ಕಾನನದ ಮೃಗಪೋತಕೀಪರಿ |
ಕಾನಕಾಂಗಮಿದಮಮ ಸೋಜಗಮಲ್ತೆ ಪರಿಕಿಸಲು ||
ನಾನಿದನು ಪಡೆಯುತ್ತೆ ವಿಪಿನ |
ಗ್ಲಾನಿಯನು ಪರಿಹರಿಪೆನೆನುತಾ |
ಮಾನಿನೀಮಣಿ ಸಡಗರದಿ ಹೊದ್ದಿದಳು ವಲ್ಲಭನ ||೫೭||

ಮೆಲ್ಲನೈತಂದಿದಿರೆ ನಿಂದಿಹ |
ವಲ್ಲಭೆಯನೀಕ್ಷಿಸುತ ರಾಮನು |
ಪಲ್ಲವಾಧರೆ ನಿನ್ನ ಬರವಿಂಗೇನುಕಾರಣವು ||
ಇಲ್ಲದೇನುಂಬರಿದೆಬರ್ಪವ |
ಳಲ್ಲ ನಿನ್ನಯ ಮನದಬಯಕೆಯ |
ನಲ್ಲಳೇ ನೀಂನುಡಿಯೆ ನಡೆಸುವೆನೆಂದನಾರಘುಜ ||೫೮||

ಇನಿಯನೊರೆದಿನಿವಾತನಾಲಿಸಿ |
ಘನಮನೋರಥವಾಂತೆನೆನ್ನುತ |
ವನಿತೆ ನುಡಿದಳು ಕಾಂತ ಕೇಳಿಂದೆಮ್ಮವನದೆಡೆಗೆ ||
ಕನಕಮಯಮೆನೆ ಮೆರೆವತನುವಿನ |
ವಿನುತಹರಿಣನದೊಂದುಬಂದಿಹು |
ದೆನಗೆ ಮನದಭಿಲಾಷೆಯಿಹುದದನೊಂದಬೇಕೆಂದು ||೫೯||

ಎದ್ದು ನಡೆ ಬೇಗಿರದೆ ತೋರ್ಪೆನು ।
ಮುದ್ದುಮಿಗವನು ನಿನಗೆ ಮೆಲ್ಲನೆ ।
ಸದ್ದುದೋರದೆ ಬರ್ಪುದೆನ್ನೊಡನೆನುತ ಕೈವಿಡಿದು ॥
ಉದ್ದುರುಳುವನಿತರೊಳಗಾಮಿಗ ।
ನಿದ್ದತಾವನು ಸೇರಿ ರಮಣನೆ ।
ಕದ್ದುನನ್ನಯಮನವನಚ್ಚರಿಗೊಳಿಪಮಿಗವಿದೆಕೊ ॥೬೦॥

ಸದಯನಿನ್ನನುರಾಗರಸಕಾ ।
ಸ್ಪದವುನಾನಹುದಲ್ಲವೆಂಬುದ ।
ನಿವರಿನರಿಯಲುಬಹುದು ನೀನಿಂದಿರದೆ ಸಾಹಸದೆ
ಚದುರತನವನು ತೋರಿ ಬಾಣದೆ ।
ಸದೆದು ನೋಯಿಸದಂತೆ ಪಿಡಿಯುತ ।
ಮುದದೆ ತಂದೆನಗೀಯೆ ಕಾಲವ ಕಳೆವೆನಿದರೊಡನೆ ॥೬೧

ಎಂದು ತನ್ನಯ ಮನದ ಕಾಂಕ್ಷೆಯ ।
ನಿಂದುಮುಖಿ ಬಿನ್ನೈಸಲಾರಘು ।
ನಂದನನು ಬಗೆ ತಣಿಯೆ ಮುದ್ದಿಸುತರಸಿ ಲಾಲಿಪುದು ॥
ಇಂದು ನಿನಗೀಬಣಗುಪುಲ್ಲೆಯ ।
ತಂದುಕೊಡೆ ಮತ್ಪ್ರೇಮಸಿಂಧುವ ।
ಪೊಂದಿದಳತೆಯು ಪೂರ್ಣವಾಯಿತ್ತೆಂದು ಭಾವಿಸೆಯಾ ॥೬೨॥

ಸುಂದರಾಂಗಿಯೆ ನನಗೆನಿನ್ನೊಳ |
ಗೆಂದುಮಿರ್ಪೊಲ್ಮೆಯನುಪರಿಕಿಸೆ |
ಬಂದೊಡಾಕಸ್ಮಿಕದೆ ನಿನಗೊಂದೆಡರುನಾನೋಡನೆ ||
ಮಂದರಾದ್ರಿಯನಾದೊಡಂಕೀ |
ಳ್ತಂದುಜಲಧಿಯನಡುವೆಸಾಹಸ |
ದಿಂದಸೇತುವನಾದೊಡಂಬಂಧಿಸುತಸಲಹುವೆನು ||೬೩||

ಆಗ ಸೀಂ ಸಂತುಷ್ಟೆಯಾಗನು |
ರಾಗದಾಳವದೆನ್ನೊಳಿಂತುಂಟೆ |
ರಾಘವನೆ ನಾಸರಿದುದಿಲ್ಲೆಂದೆನುತತಕ್ಕೈಸೆ ||
ನಾಗವೇಣಿಯೆ ನನ್ನ ಜನುಮವ |
ದಾಗ ಸಾಫಲ್ಯವನು ಪಡೆಯುಲು |
ಭೋಗಿಶಯನನ ಪದವಿಯಾಂತನ ತೆರದಿ ಸುಖಿಸುವೆನು ||೬೪||

ಇದೋಡಿಲ್ಲಿಯೆ ರಮಣಿ ನೀಂ ನಿಮಿ |
ಷಾರ್ಧದಲಿತಂದೀವೆನೆನ್ನುತ |
ಸಾರ್ದುಲಕ್ಷ್ಮಣನೆಡೆಯನೆಲ್ಲವನವನೊಳದನರಿಪಿ ||
ಪೊರ್ದಿತೆನಗೀವ್ಯಸನವಾದೊಡ |
ಮಿರ್ದು ಬಳಿಯೊಳು ಸೀತೆಯನು ಬಲು |
ಬರ್ದಿನಿಂ ಕಾದಿಹುದು ನೀನೆಂದೆಚ್ಚರಿಸಲವನು |೬೫||

ಏನಿದಚ್ಚರಿಯಣ್ಣ ನೀನಿದು ।
ಹೀನರಾಕ್ಷಸಮಾಯೆಯೆಂಬುದ ।
ನೇನುಮರಿಯದನಂತೆ ಭ್ರಾಂತಿಯನೊಂದಿ ಗಮಿಸುವುದು ॥
ಶ್ವಾನದೆಕ್ಕಲನೆರಳೆಯುಂದವ ।
ನಾನುತಾವಮಾಯಾವಿದನುಜವಿ ।
ತಾನವಾವಗಮಿಲ್ಲ ಚರಿಸುವುದೆಂದು ಕೇಳ್ದರಿಯ ॥ ೬೬ ॥

ಲೋಕದೊಳಗೀಪರಿಯಮೃಗವುವಿ
ಲೋಕಿಸುವೊಡಿಲ್ಲಾವದೆಸೆಯೊಳ ।
ಮೀಕುಟೀರದ ಬಳಿಯೊಳಂದುದ್ಭವಿಸಿದಂತಿಹುದು ॥
ಸೋಕಿ ಬೆರೆಯದೆ ಮಿಕ್ಕಮೃಗಗಳು ।
ನೂಕಿ ಬೆದರುತ ಚದರಿಪೋಪುವು ।
ಸಾಕು ಸಾಕಿದನರಿಯಬಾರದೆ ದೇವಕವಡೆಂದು ॥ ॥ ೬೭ ॥

ತಮ್ಮ ನೀನಾಡಿದುದು ಸತ್ಯವು ।
ಸಮ್ಮತವು ತನಗಾದೊಡಂಕೇ ।
ಳೆಮ್ಮರಸಿ ಬಯಸಿದೊಡೆ ನಾನದಕೊಪ್ಪಿದೆನುಬಳಿಕ ।
ಸುಮ್ಮನೇ ಕಳುಕುವುದು ಕೇಳೀ ।
ಹೊಮ್ಮಿಗವು ನಿಜಮಲ್ಲವಿಳನೆಂ ।
ದೊಮ್ಮೆ ತೋರ್ದೊಡೆ ಕಡಿದು ಬಿಸುಡುವೆನೇಕೆ ಸಂಶಯವು॥ ೬೮ ॥

ಅರಸಿಯಿಹಳೆಡೆವಿಡದೆ ಕಾಯ್ದಿರು ।
ಬರುವೆನತಿಶೀಘ್ರದಲಿ ತಾನೆಂ ।
ದರಸನಾಹರಿಣನನು ಬೆನ್ನಟ್ಟಲ್ಕೆ ಬಳಿಕಿರದೆ ।
ತರತರದ ನಟನೆಗಳ ತೋರು ।
ತ್ತಿರದೆ ಸಿಕ್ಕಿತುಸಿಕ್ಕಿತೆನಿಸುತೆ ।
ಭರದೆ ಮುಂದಕೆ ಜಿಮ್ಮಿ ನಿಲ್ಲುತ ನೋಡಿ ಪಿಂಗಡೆಗೆ ॥೬೯॥

ಬರುವನಿನ್ನೇಂ ಸರಿಸಕೆಂಬನಿ ।
ತರೊಳು ಜಾರುತ ಮರಳಿ ನಿಲ್ಲುತ ।
ಮರೆಯದೀಪರಿಬವಣಿಗೊಳಗಾಗಿಸುತ ರಾಘವನ ॥
ಪರಿಪರಿಯ ಬಳಲಿಕೆಯನೀಯು ।
ತ್ತಿರದೆ ವನದಿಂ ವನಕೆ ಸಾರುತ ।
ಭರದಿನೊಯ್ದುದು ನೃಪನ ದೂರದೊಳುಳದುದಾಶ್ರಮವು ॥೭೦॥

ಜಲಜಸಖನಪದಾಬ್ಧಿಗಿಳವನು ।
ಹಲವುಪಾಯುಗಳೆಲ್ಲ ತೀರ್ದುವು ।
ಹುಲುಮಿಗವು ಕೈಸೇರದಾಯುಸವಾಂತುದೆನ್ನೊಡಲು ॥
ತಿಳಿಯಲಿದು ಸಾಮಾನ್ಯವಾಗಿರ ।
ದೆಲೆವನೆಯು ಬಹುದೂರವಾಯಿ ।
ತ್ತುಲಿದನಾಗಳೆ ತಮ್ಮ ತಾನಿದು ಕಪಟದ ಮೃಗವೆನುತ ॥೭೧॥

ಹಿರಿಯುಮಕ್ಕಳು ಪ್ರಷ್ಟಕಾಯರು ।
ಕಿರಿಯುವರು ಮೇಧಾವಿಗಳೆನು ।
ತ್ತೊರೆವನಾಳ್ನುಡಿ ಸತ್ಯವಾದುದು ನಮ್ಮವಿಷಯದಲಿ ॥
ಅರಿಯುದಿಂದ್ಯೆತಂದಬಳಿಕಿ ।
ನ್ನಿರುವುದೇನೀಖೂಳಮಿಗವನು ।
ತರಿದು ಚರ್ಮವ ಕೊಯ್ದುತನ್ನಯುರಮಣಿಗಿತ್ತಪೆನು ॥ ೨೨ ॥

ಎನುತ ಧನುವಿಂಗಾಗ ಬಾಣವ ।
ನನುಗೊಳಿಸುತೆಸೆಯಲ್ಕೆ ಹರಿಣನು
ದನುಜರೂಪದೆ ಲಕ್ಷ್ಮಣನೆ ಹಾ ಸೀತೆ ಹಾ ಎನುತ ॥
ವನವುದೆಲ್ಲವು ಮೊಳಗುವಂದದೊ ।
ಳಿನಕುಲೇಶನ ಕೊರಲದನಿಯುನೆ ।
ಅನುಕರಿಸಿ ಮಿಗೆ ಕೂಗುತಸುವನು ಬಿಟ್ಟುದಾಕ್ಷಣವೆ ॥ ೨೩ ॥

ದುಗುಡವಾಂತನು ರಾಮನಾಗಳು ।
ವಿಗಡರಕ್ಕಸಮಾಯು ಬಲ್ಲಿತು ।
ಪುಗದೆ ಬಿಡದೀನುಡಿಯು ಸೀತಾಲಕ್ಷ್ಮಣರ ಕಿವಿಗೆ ॥
ಬಗೆಬಗೆಯು ಬಗೆಗಳನು ಕಲ್ಪಿಸಿ ।
ಹಗರಣವನೇಂತಹರೊ ಕಾಣೆನು ।
ಮುಗುವಲಾ ಸೌಮಿತ್ರಿಯೆಂದಾರಾಮನಳುಕಿದನು ॥ ೨೪ ॥

ತಾಳಲಾರೆನು ಹರಣದೆರೆಯುನು ।
ವೇಳೆಗಳೆವನದೇತಕರಿಯೆನು ।
ಪೋಳುಮೃಗದಿಂದೇನು ಬಿಸುಟದನೇಕೆ ಬಾರನೊ ಹಾ ॥
ಕಾಳುಮೂಳನೆ ಬಯಸೆ ಗದರಿಸಿ ।
ಪೇಳಲಾರದೆ ಬುದ್ಧಿಯುನು ತನ।
ಗಾಳುಗೆಲಸಕೆ ತೆತ್ತುದೇಹವನೇಕೆ ದಣಿಸುವನೋ ॥ ॥೨೫॥

ಹರಿಣನಿಲ್ಲಿಗೆ ಬರಲದೇತಕೆ ।
ಯಿರದೆನಾನದಬಯುಸಲೇತಕೆ ।
ತರುವೆನೆನುತಲಿ ತೆರಳಲೇತಕೆ ರಮಣನೇನಹನೊ ॥
ಅರಿಯದೊಂದುಮನಕೆರಮಣನ ।
ಬರವಿಗೇತಕೆ ತಡವೆನುತ್ತಾ ।
ತರುಣಿ ಮಿಗೆ ಚಿಂತಿಸುವಸಮಯಕೆ ಕೇಳ್ದುದಾದದನಿಯು ॥ ೨೬॥

ಬಿದ್ದುದೇನೀಗೆನ್ನಕಿವಿಯೊಳು ॥
ಸದ್ದು ರಾಮನದಾಗದಿರದಿದು ।
ವದ್ದಿಪೋದುದೆ ಧರಣಿ ತಾನಕಟಬ್ಧಿಯೊಳಗಿಂದು ।
ಬಿದ್ದರೋಭೂಮಿಗೆಶಮೀಂದುಗ ।
ಳುದ್ದವಹಸುರಮಾರ್ಗದಿಂಮೇಣ್ ।
ಕದ್ದುದೋವಿಧಿತನ್ನಮಂಗಳಸೂತ್ರದೈಸಿರಿಯ ॥ ॥೨೭॥

ಏನಿದಿಂತಾಯ್ತೆಂದು ಮೈದುನ ।
ನೀನು ಕೇಳೆಯ ರಾಘುವೇಶನ ।
ದೀನತಾಲಾಪವನು ಕೇಳಯುಮಿನ್ನು ಜೀವಿಪೆಯ ॥
ನಾನುಭೂಮಿಜೆಜಡತೆಯಾಂತವ ।
ಳೇನಬಲ್ಲೆನುಕಷ್ಟವನುಕೇಳ್ ।
ನೀನಭಿಜ್ಞತೆಯಾಂತಮಾನವನಾಗಿಚಿಂತಿಸೆಯಾ ॥ ॥೭೮॥

ಪೋಗುಪೋಗೈ ಲಕ್ಷ್ಮಣನೆ ನಿನ ।
ಗೀಗವೇಳೆಯೆ ಯೋಚನೆಗೆ ನಡೆ ।
ಬೇಗನಿಲ್ಲದಿರಾರ್ಯಪುತ್ರಗೆ ಜೀವಸಂಶಯವು ॥
ಆಗುಹೋಗೇನೆಂಬುದರಿಯದೆ ।
ಬಾಗಿಸಿದಶಿರದಿಂದ ಮುಂಗಡೆ ।
ಕೈಗಳನು ಮುಗಿಯುತ್ತ ನಿಂದಿಹುದಕ್ಕೆ ಸಮಯವಿದೆ ॥೭೯॥

ಏನಿದೇನೀನಡತೆ ತಕ್ಕುದೆ ।
ನಾನಳಲಿ ನಿಂದೊರಲುತಿರ್ದರು ।
ಹಾನಿಮಾನದಮಾನವನ ತೆರದಿಂದ ವರ್ತಿಸುವೆ ॥
ಮಾನವೇ ನಿಮ್ಮಣ್ಣನಾಪದ ।
ವಾಸುತಿರೆ ನಿನಗೆಚ್ಚಳವೆಘಡ ।
ನೀನುನಿಲ್ಲದೆತೊಲಗುತೊಲಗೆಂದುಲಿದಳಾಸೀತೆ ॥ ॥೮೦॥

ಕೇಳುತಾರ್ತಧ್ವನಿಯು ಲಕ್ಷ್ಮಣ ।
ನಾಲಿಯಲಿ ನೀರ್ದುಂಬಿ ಸಂಶಯ ।
ಜಾಲದಲಿಮನಸಿಲುಕಲೇನುಮನರಿಯದರೆಗಳಗೆ ॥
ಮೇಲೆ ನಿಶ್ಚೈಸುತ್ತ ರಾಕ್ಷಸ ।
ಜಾಲವಲ್ಲದೆ ಕಾಣೆ ಲಕ್ಷ್ಮೀ ।
ಲೋಲನಸುವಿಂಗುಂಟೆ ಕೊರತೆಯು ಸತ್ಯವೆಂದೆನುತ ॥೪೧॥

ಧರಣಿಜಾತೆಯ ನಿಷ್ಠುರೋಕ್ತಿಯ ।
ಸರಕುಗೈಯದೆ ದೇವಿ ಕೇಳ್ವುದು ।
ಸರಸಿರುಹಭವತಾತಗಳವುಂಟೆಂಬರೇ ತಾಯೆ ॥
ಧರಣಿ ಮೇಣೀಚಂದ್ರಸೂರ್ಯರು ।
ಮೆರೆವನಕ್ಷತ್ರಾದಿಗಳು ವಿಧಿ ।
ವಿರಚಿತಾಂಡವಿದೆಲ್ಲ ಲಯಿಸಿಯು ನಾಶವಿಲ್ಲವಗೆ ॥೪೨॥

ತಾಯೆ ನೀವೇ ರಮೆಯು ನಿಮ್ಮಯ ।
ನಾಯಕನೆ ಲಕ್ಷ್ಮೀಶನಿಂತಿರ ।
ಲಾಯುತವೆ ನಿಮಗಿನಿತುಮರವೆಯು ದನುಜಮಾಯೆಯಿದು ॥
ರಾಯರಾಘವನನ್ನು ತೋರ್ಪೆನು ।
ನೋಯಲಾಗದು ಮನದೆ ನಿಖಿಲಾ ।
ಮ್ನಾಯಮೂರ್ತಿಯ ಕಾಂಬಿರಿನ್ನರಗಳಗೆಯೊಳಗೆನಲು ॥೪೩॥

ಅರಸನಳಲಿಂ ಕುದಿದು ಬೇಯುವ |
ಪರಮಷಾಧ್ವಿಯ ಮನಕೆ ರುಜೆಪ್ರದೆ |
ಪೆರರು ಪೇೞುವನೀತಿವಚನವು ಕೇೞುತಾಕ್ಷಣದಿ ||
ಕೆರಳಿದಳು ಲಲಿತಾಂಗಿ ನಿನ್ನಯ |
ಪರಿಯೆ ಮತ್ತೊಂದಾಗಿ ತೋರ್ಪುದು ||
ಪರಿದುದಾಮೊದಲಿದ್ದಭಕ್ತಿಯು ನಮ್ಮೊಳೆಲೊ ನಿನಗೆ ||೮೪||

ತರುಣಿಯನು ರಕ್ಷಿಸುವುದೆನುತೊರೆ |
ದಿರಿಸಿ ಪೋಗಲು ನಿನ್ನನವನಿಪ |
ನೆರಡನೆಣಿಸುವೆಯೇನೊ ಪಾಪಿಯೆ ನಿನ್ನ ನುರೆಸುಡಲಿ ||
ಹರಣದೆರೆಯಂಗೊದಗಲಾಪ |
ತ್ತರಿದರಿದು ಜೀವಿಪೆನೆ ತಾನಿ |
ನ್ನಿರಲುಮಾರೆನು ತೊರೆವೆನಸುವನೆನುತ್ತ ಸಡಗರಿಸಿ ||೮೫||

ಸೆರಗನೆಳೆದದನಾಗ ಹೊಸೆಯುತ |
ಕೊರಳ ಸರಿಸಕೆ ಕೊಂಡುಪೋಗಲು |
ಭರದೆ ಲಕ್ಷ್ಮಣ ಬೇಡಬೇಡೆಂದೆರಗಿ ಪದಯುಗಕೆ ||
ದುರುಳದನುಜರು ನಿಮಗಪಾಯವ |
ನಿರದೆ ಹವಣಿಪರಾನುಪೋಗಲು |
ತೆರಳುವೆನು ತಾನಾದುದಾಗಲೆನುತ್ತ ಪೊರಮಡುತ ||೮೬||

ಶಿವಶಿವೇನಿಂತಾದುದೀಗಲು ।
ಭುವನಮಾತೆಯ ಬುದ್ಧಿಗಂಥತೆ ।
ಕವಿಯಿತೆನಲಿನ್ನುಳಿದಪೆಣ್ಗಳನೆಂದು ಫಲವೇನು ॥
ನವೆದನಿವನೆಮಗಾಗಿ ಯೆಂಬುದ ।
ಲವವನಾದರು ಮನಕೆ ತಾರದೆ ।
ಕಿವಿಗೆ ಸಲ್ಲದಮಾತನಾಡುತ್ತೆನ್ನನಟ್ಟಿದಳು ॥೮೭॥

ನಾರಿಯರು ಕಡುಮೂರ್ಖೆಯರೆನುತ ।
ಸಾರುತಿರ್ಪವು ನೀತಿವಚನಗ ।
ಳಾರಯಿದು ನೋಡಲ್ಕೆ ನುಡಿವುವು ಸತ್ಯವನೆ ತಾವು ॥
ದೂರದೃಷ್ಟಿಯೊಳಪ್ಪಸುಖವೇ ।
ಸಾರವೆಂಬುದನರಿಯದಾಕ್ಷಣ ।
ತೋರುತಡಗುವಸುಖವೆ ಸಾರವದೆನುತ ನಂಬುವರು ॥೮೮॥

ಆವವಂಶವೆ ಕೆಡಲಿ ತಮ್ಮಿಂ ।
ದಾವನುರುತರಕೀರ್ತಿಯುಳಿಯಲಿ ।
ತಾವದೇನಪದೆಸೆಯನಾಸಲಿ ಹಿಡಿದಚಲವನ್ನು ॥
ಆವುದೊಂದನು ನೋಡದಮಮಾ ।
ಭಾವಕೇಪರಿತೋರ್ದುದದೆ ಸಂ ।
ಭಾವಿತವು ತಾನೆಂದು ಸಾಧಿಪಯತ್ನಗೈದಪರು ॥೮೯॥

ಎಂದು ಲಕ್ಷ್ಮಣ ಮನದೆ ಯೋಚಿಸು ।
ತಂದು ಮೋದಕೆ ನಡೆಯುತಲ್ಲಿಯೆ ।
ನಿಂದು ಪಿಂದಕೆ ತಿರುಗಿ ನೋಡುತ ಸುಯ್ದು ಸೀವರಿಸಿ ॥
ಬಂದುದೆಲ್ಲವು ಬರಲಿ ತಾಪಡೆ ।
ತಂದುದನು ಮತ್ತಾವನುಂಡಪ ।
ನಿಂದು ತಾನಿಲ್ಲಿಹುದು ಮತವಲ್ಲೆನುತ ತೆರಳಿದನು ॥೯೦॥

ಅತ್ತ ಲಕ್ಷ್ಮಣನಂತು ತೆರಳ ।
ಲ್ಕಿತ್ತ ರಾವಣನಿದುವೆ ಸಮಯಮೆ ।
ನುತ್ತೆ ಭೂಮಿಜೆಯಿರ್ಪಪರ್ಣಾಗಾರದೆಡೆಗೈದಿ ॥
ಚಿತ್ತಮೂವಳೊಳೀಸುದಿನ ನೆಲ ।
ಸಿತ್ತೊ ತಾನಾಸುಂದರಾಂಗಿಯ ।
ನೆತ್ತಿಮುದ್ದಿಟ್ಟೊತ್ತಿತಾಲಿಂಗಿಸುವೆನೆಂದೆನುತ ॥೯೧॥

ಉಟ್ಟಿಕಾಷಾಯಾಂಬರದ ಪಣೆ ।
ಗಿಟ್ಟಸಿತಭಸಿತತ್ರಿಪುಂಡ್ರದ ।
ದಿಟ್ಟಿಯನು ಸೆರೆಗೈವಭಸ್ಮವ ಧರಿಸಿದವಯುವದ ॥
ಜಟ್ಟಿಮುನಿಯಿವನಾವನೆಂಬವೊ ।
ಲಟ್ಟಹಾಸದೆ ಜಗ್ಗುವಡಿಗಳ ।
ನಿಟ್ಟು ರಾಮನ ಪಟ್ಟದರಸಿಯ ಮುಟ್ಟುವಾಸೆಯಲಿ ॥ ॥೯೨॥

ಬಂದು ಬಾಗಿಲಬಳಿಗೆ ನಿಂದವ ।
ನೆಂದನಾರೌ ಗೃಹದೆ ಭಿಕ್ಷುವ ।
ತಂದು ನೀಡುವುವತಿಥಿಗೊಲಿದಪನಿಂದುಧರನಿಂದು ॥
ಎಂದುನುಡಿವಾಕಪಟವೇಷಿಯು ।
ನಂದು ರಕ್ಕಸನೆಂಬುದರಿಯದೆ ।
ವಂದಿಸುತ್ತರ್ಘ್ಯಾದಿಸತ್ಕಾರಗಳನಿರದೆಸಗಿ ॥ ॥೯೩॥

ಬಳಿಯೊಳವನತೆಯಾಗಿ ಕಾಂತನು ।
ಬಳಿಯೊಳಿಲ್ಲದುದಕ್ಕೆ ಚಿಂತಿಸು ।
ತಳುಕುತವನೈತರುವಮಾರ್ಗವ ಬಿಡದೆ ನೋಡುತಿಹ ॥
ಲಲನೆಯನು ಕಾಣುತ್ತ ಮನುಮಥ ।
ನಲಗಿನಿಂ ಕಡುನೊಂದ ಹೃದಯದ ।
ಖಳಶಿರೋಮಣಿಯಾಗ ಕೇಳಿದನಾಪತಿವ್ರತೆಯ ॥ ॥೯೪॥

ಚೆಲುವೆ ನೀನಾರಾರ ಕುವರಿಯು ।
ತಿಳಿಪದಾವನು ನಿನ್ನರಮಣನು ।
ಬಲಸಮನ್ವಿತರಸುರರಿರ್ಪೆಡೆಗೇತಕೈದಿದಿರಿ ॥
ಜಲಜಭವಸೃಷ್ಟಿಯಲಿ ಪಲಬರ ।
ನಲಘುಲಾವಣ್ಯಾಂಗನೆಯರನು ।
ಬಳಸಿ ಬಲ್ಲೆನು ಕಾಣೆ ನಿನ್ನಯರೂಪಿಗಿನ್ನೆಣೆಯ ॥ ॥೯೫॥

ಮಾನಿನೀಮಣಿಯಿದನು ನಂಬೆನ |
ಲೇನಿದಕಟವರಿಂತುನುಡಿವರ್ |
ಧ್ಯಾನನಿಷ್ಠರಿಗೇಕೆ ಯುವತಿಯರಂದ ಚಂದಗಳು ||
ಮಾನವೇಶನದೇಕೆ ಬಾರದೆ |
ತಾನಿನಿತ್ತು ವಿಲಂಬವೆಸಗಿದ |
ನೀನವೀನನ ಬರವು ಮನಕುರುಭಯುವನಿತ್ತಪುದು ||೯೬||

ಕಾಲಹರಣವನೆಸಗುತಿರಲಾ |
ಭೂಲಲಾಮರು ಬರುವರವರೀ |
ಯಾಳನಾಟಕೆ ತಕ್ಕುಪಾಯುವ ತಾವೆ ಹವಣಿಪರು ||
ಕೇಳದೀತನ ನುಡಿಗೆ ಮರುನುಡಿ |
ವೇಳತೊಡಗುವೆನೀಗಳೆನುತಾ |
ಲೋಲಲೋಚನೆಯಾಗಳೊರೆದಳು ತನ್ನ ಸಂಗತಿಯ ||೯೭||

ಯತಿಯೆ ಕೇಳ್ಳೈ ನಾನು ಮೆರೆವಾ |
ಮಿಥಿಲೆಯಾಣ್ಮನ ಜನಕಭೂಪನ |
ಸುತೆಯು ತನ್ನನು ಕರೆದಪರು ಸೀತಾಭಿಧಾನದಲಿ ||
ಕ್ಷಿತಿಪದಶರಥಸಾರ್ವಭೌಮನ |
ಸುತನು ಸುಯಶೋನ್ವಿತನು ರಾಮನು |
ಪತಿಯು ತನಗವನೆಸೆವಯೋಧ್ಯೆಯ ರಾಜ್ಯಭಾರವನು ||೯೮||

ಪಿತನ ಸತ್ಯೋದ್ಧಾರಕೋಸುಗ ।
ಜತೆಯೊಳುದಿಸಿದಭರತಗೊಲಿದಿ ।
ತ್ತತಿಭಯಂಕರವಿಪಿನದೊಳ್ಪದಿನಾಲ್ಕುವತ್ಸರವ ॥
ಹಿತದೆ ಕಳೆಯಲ್ಕಹಹ ಬಂದಿಹ ।
ನತಿಪರಾಕ್ರಮಶಾಲಿ ಸುಗುಣಾ ।
ನ್ವಿತನು ಸೋದರವರ್ಯಲಕ್ಷ್ಮಣಸಹಿತ ಸನ್ನೊಡನೆ ॥೯೯॥

ಅರಸುರಾಮನು ಸುಪ್ರಸಿದ್ಧನು ।
ಪರಮಶಿಷ್ಟನು ಸತ್ಯಸಂಧನು ।
ಸರಸನತಿಶುಚಿ ಬಹುದಯಾಪರನುರುಗುಣಾರ್ಣವನು ॥
ಸುರನರೋರಗದನುಜರೊಗ್ಗಾ ।
ಗೆರೆಯುನೊಳ್ಪ್ರತಿಭಟಿಸಿ ನಿಲ್ಲಲು ।
ಧುರದೊಳವರರೆಗಳಿಗೆಯುಳಿಯರು ಕೇಳು ಪೌರುಷವ ॥೧೦೦॥

ಧರಣಿಯೊಳಗಣ ಸಾರ್ವಭೌಮರ ।
ನೆರವಿ ಸೇರಿದುದಾಸ್ವಯಂವರ ।
ವರಮಹಾಮಂಟಪದೆ ತನ್ನನು ವರಿಸುವಾದಿನದೆ ॥
ಹರನ ಧನುವನು ಸೆಳೆದು ನಾರಿಯ ।
ಕೊರಲಿಗೇರಿಸಿ ಮೆರೆವನಾರಿಯ ।
ಕೊರಲಿಗನುಗೊಳಿಸುವುದು ತಾಳಯನೆನುತ ಮತ್ಪಿತನು ॥೧೦೨॥

ಸೂರಲಿರದಾನೃಪರು ಚಾಪಕೆ ।
ದೂರದಿಂ ನಮಿಸುತ್ತ ಸಾಗದೆ ।
ವೋರೆಗಳ ಜೋಲಿಡುತ ನಿಂದಿರೆ ಕಂಡು ರಾವಣನು ॥
ತೋರುವೆನು ಪೌರುಷವನೆನುತಲಿ ।
ಮೀರಿ ಬಗ್ಗಿಸೆಯೊದೆಯಲದು ಕಾ ।
ಲ್ಜಾರಿ ಬೀಳಲ್ನಗೆಯೊಳದ್ದುದು ನೆರೆದ ನೃಪನಿಕರ ॥೧೦೩॥

ಎದ್ದನಾಗೆನ್ನರಸರಾಮನು ।
ಸದ್ದು ನಿಂದುದು ರಾಜಸಭೆಯಲಿ ।
ಹೊದ್ದಿದನು ಶಿವಧನುವನೆಡಗೈಯಿಂದ ಪಿಡಿದದನು ॥
ತಿದ್ದಿ ನಾರಿಯನೊತ್ತಿ ಬಾಗಿಸೆ ।
ಬಿದ್ದುದಿಳೆಗೆರಡಾಗಿ ಮುರಿದಂ ।
ದಿದ್ದರೆಲ್ಲರು ಪಟದಬೊಂಬೆಗಳಂತೆ ಬೆರಗಿನಲಿ ॥೧೦೪॥

ಇನಿತುಸತ್ವದೆ ಮೆರೆವಕಾಂತನ ।
ಘನಪರಾಕ್ರಮವರಿಯದಿಲ್ಲಿಯು ।
ದನುಜರಿದಿರಿಸಿ ಹರಣವಿತ್ತರವೋಘಶರಗಳಿಗೆ ॥
ವಿನಯ ನೀನಾರಿತ್ತಬರವೇ ।
ನೆನಗೆ ಪೇಳುವುದೆನುತಲುಸುರುವ ।
ವನಿತೆಯಾನುಡಿಗೇಳಿ ರಾವಣನಾಗ ನಗುತೆಂದ ॥೧೦೫॥

ಹೇಳತೊಡಗಲೊ ತನ್ನಚರಿತೆಯು ।
ಕೇಳುತದ ನೀಂ ಸುಮ್ಮನಿರ್ಪೆಯು ।
ಕಾಳುಮನುಜನ ರಾಮನೆಂಬನ ಕೂಟ ಬೇಡೆನೆಯು ॥
ಪಾಳುಮನೆಯೊಳಗುರಿವದೀಪದ ।
ವೋಲು ನಿನ್ನೀರೂಪು ವಿಫಲವು ।
ಬಾಲೆ ನಿನಗನುರೂಪನೇನಾಮಾನವಾಧಮನು ॥೧೦೬॥

ದೇವದಾನವಯಕ್ಷಕಿನ್ನರ ।
ರಾವಗಂ ನೆರೆ ಸೇವಿಸುತ್ತಿಹ ।
ರಾವನಂ ತಾನಾವನಮರಾವತಿಯನೇಳಿಸುವ ॥
ಠೀವಿಯಿಂ ರಾಜಿಸುವಲಂಕೆಗೆ ।
ದೇವನೆನಿಪನೊ ಮೂರುಲೋಕವ ।
ಕಾವನಾದಿತಿಜಪತಿಯೀಯತಿಯೆನುತ ತಿಳಿ ಯುವತಿ ॥೧೦೭॥

ತನ್ನ ನಾಮವ ಕೇಳಿದೊಡನೆಯೆ ।
ಖಿನ್ನರಪ್ಪರು ದಿಕ್ಪತಿಗಳೆನ ।
ಲಿನ್ನುಳಿದಹಾಹೆಗಳ ಪಾಡೇಂ ತೆಗೆ ನರಾಧಮರ ॥
ಮುನ್ನ ಗೈದಿಹತಪದ ಫಲದಿಂ ।
ದೆನ್ನರಾಣಿಯರೆನಿಸಿ ಲೋಕದ ।
ಮನ್ನಣೆಗೆ ಗುರಿಯೆನಿಸಿಕೊಂಡರು ಹಲವುಕನ್ನೆಯರು ॥೧೦೮॥

ಇಲ್ಲ ಕೇಳ್ಸರಿ ತನ್ನವೈಭವ ।
ಕಿಲ್ಲಪಾಸಟ ಬಾಹುಬಲಕಿ ।
ನ್ನಿಲ್ಲವಿಂದೆನ್ನಾಜ್ಞೆಗುಲ್ಲಂಘುನೆಯು ಮೂಜಗದೆ ॥
ಬಲ್ಲತನಕೆಣೆಯಿಲ್ಲವಿದ್ಯೆಗ ।
ಳೆಲ್ಲವಡಗಿಹುವೆನ್ನಮೊಗದೊಳೆ ।
ನಲ್ಲಳೇ ನೀನಿನ್ನು ಮನವೊಲಿದೆನ್ನ ವರಿಸುವುದು ॥೧೦೯॥

ಅರಸಿಯರ ತನ್ನವರ ನಿನ್ನಯ ।
ಪರಿಚರಿಯಕಿರಿಸುವೆನು ಕೇಳೆ ।
ನ್ನರಮನೆಯುಮೆನ್ನೈಸಿರಿಯು ನಿನ್ನದು ವಿಚಾರಿಸಲು ॥
ಹಿರಿಯಮಗನೆನಿಸಿದೊಡಮವನಿಯ ।
ಸಿರಿಯುನೀಯದೆ ಜನಕನಟ್ಟಲು ।
ಗಿರಿವನಂಗಳ ಸೇರಿ ಜೀವಿಪ ತಿರುಕನಲೆ ರಾಮ ॥೧೧೦॥

ಹರಿತವಾದಲಗುಗಳು ನಾಂಟದ ।
ಪರುಷವಾಗಿಹಹೃದಯವಿದು ಸುಮ ।
ಶರಕೆ ಪಕ್ಕಾದುದನು ನೋಡಲು ನಿನ್ನಮಹಿಮೆಕಣಾ ॥
ವಿರಹದಾವಾನಲನ ಪೆರ್ಚಿಸಿ ।
ಕರಗಿಸುತಲೆನ್ನೆದೆಯ ನೀರೆನ
ಲರಲ ಸರಳಿಂಗೆಡೆಯ ಮಾಡಿದೆಯಲ್ತೆ ನೀನಿಂದು ॥೧೧೧॥

ಎಂದು ನುಡಿವಾದಶಮುಖನ ಪೂ ।
ರ್ಣೇಂದುಮುಖಿ ನೋಡುತ್ತ ಭೀತಿಯ ।
ನೊಂದಿ ಮನದಲಿ ಬೆಚ್ಚಿ ಬೆದರುತ ನಡುಗಿ ಕಳವಳಿಸಿ ॥
ಮುಂದೆ ಯುಗಲಿದಪ್ರುಲ್ಲೆ ಬಲೆಯೊಳ ।
ಗೊಂದೆ ಸಿಲುಕುತ ಹೊಲಬುಗಾಣದೆ ।
ನೊಂದು ನಾನಾದೆಸೆಯನೀಕ್ಷಿಪಚಂದದಿಂದಿರದೆ ॥೧೧೨॥

ಹಿಂದೆಮುಂದಿಕ್ಕೆಲವ ನೋಡಿದ ।
ಳೆಂದು ಕಾಣದೆ ಜನದ ಸುಳಿವನು ।
ಬೆಂಡಬಿದಿಯನು ಬೈದುಜೀರ್ದಳು ಗತಿಯದೇನೆನುತ ॥
ಇಂದದೇತಕೆ ಸಂಜೆಯಾದರು ।
ಬಂದು ಮನೆಯನು ಸೇರದಿರ್ಪರು ।
ಸುಂದರಾಂಗರು ರಾಮಲಕ್ಷ್ಮಣರೆಂದು ಹಲುಬಿದಳು ॥೧೧೩॥

ಬಳಿಕ ಚಿಂತಿಸಿ ಫಲವದೇನೆಂ ।
ದಳುಕದೆಂದಳು ಕೇಳು ನೀಚನೆ ।
ಕುಲಸ ಪ್ತಿ ಮನೆಳಸಿ ಬಂದೆಯ ಖುಲ್ಲರಾವಣನೆ ॥
ಅಲಘುಶೌರ್ಯನೆನುತ್ತ ನಿರ್ಜನ ।
ನಿಳಯದಲಿ ದಂಭವನು ತೋರುವೆ ।
ಗಳಗೆ ತಾಳಿದೊಡಾಗ ಕಾಣಲುಬಹುದು ಪೌರುಷವ ॥೧೧೪॥

ಆರು ತಾನೆಂಬುದನು ತಿಳಿಯದೆ ।
ವಿಾರಿ ತುಟಿಗಳ ಮಾತನಾಡುವೆ ।
ಧೀರ ಗುಣಗಂಭೀರ ರಾಘುವನರಸಿ ನಾನಹೆನು ॥
ಮೇರುವಂದದೊಳಚಲನಬ್ಧಿಯೊ ।
ಲಾರಿಗಂ ತಡೆಯಲ್ಕಶಕ್ಯನ ।
ಪಾರಶೌರ್ಯನು ರಾಮನಾತನರಾಣಿ ನಾನಹೆನು ॥ ೧೧೪॥

ಸರ್ವಲಕ್ಷಣಸಂಪದನ್ವಿತ ।
ನುರ್ವಿಯಂದದಿ ಸಹನಶಾಲಿಯು ।
ಖರ್ವಭುಜಬಲನೆನಿಪರಘುಜನ ಪತ್ನಿ ನಾನಹೆನು ॥
ಸರ್ವಧರ್ಮವಿನಾಶರೆನಿಸುತ ।
ಲುರ್ವಿ ಕೊರ್ವಿದದುಷ್ಟದನುಜರ ।
ಗರ್ವಗಿರಿಪವಿದಾಶರಥಿಯಾ ಮಡದಿ ನಾನಹೆನು ॥ ೧೧೬॥

ಹರಿಯು ಬುಂಜಿಪವಸ್ತುವನು ಹುಲು ।
ನರಿಯು ಬಯಸುತೆ ಬದುಕಬಲ್ಲದೆ ।
ಕರಿಯಭುಜಗನ ಸರಸಕೆಳಸಿದನರನು ಜೀವಿಪನೆ ॥
ಉರಿವಬೆಂಕಿಯನುಟ್ಟಬಟ್ಟೆಯೊ ।
ಳರುಕಿಸುವೆನೆಂಬಾತನುಳವನೆ ।
ಧರೆಯುಮೇಲಿನ್ನಿರವೆ ರಾಮನ ಸತಿಯನಳಿಪಿದಗೆ ॥ ೧೧೭॥

ಶರಧಿಗೆಣೆಯೇ ಕಾಲುವೆಯು ಮದ |
ಕರಿಗೆ ಸಾಟಿಯೆ ಸೂಕರನು ಮೇಣ್ |
ಗರುಡನಿಗೆ ವಾಯುಸವೆಣೆಯೆ ಕನಕಕ್ಕೆ ಕಬ್ಬಿಣವೆ ||
ಸುರಪನಿದಿರೊಳು ಹುಲುಕಿರಾತನೆ |
ಹರಿಗೆ ಸಮನೇ ಜಂಬುಕನು ನರ |
ವರಗೆ ರಾಮಂಗಿದಿರೆ ಖಳನೀನೆಂದಳಾಸಾಧ್ವಿ ||೧೧೮||

ವ್ರತದ ಜಪತಪದತುಲಫಲಗಳು |
ಪತಿಯ ಸೇವಾಮಾತ್ರದಿಂ ನಿಜ |
ಸತಿಗೆ ದೊರೆವುವು ಮೇಲೆ ಸದ್ಗತಿಕರತಲಾಮಲಕ |
ಕ್ಷಿತಿಯೊಳದನಾಚರಿಸುತಿರ್ಪೆನ |
ಗಿತರವಿಪ್ರ್ಪದೆ ರಾಮನಲ್ಲದೆ |
ಗತಿಮನೋವಾಕ್ಕಾಯಸಾಕ್ಷಿಯೊಳವನ ನಂಬಿಹೆನು ||೧೧೯||

ಸಿರಿಯ ಸೊಬಗನು ಪೊಲ್ವಸೊಬಗೈ |
ಸಿರಿಯು ಧನದನಭಾಗ್ಯಕಿಮ್ಮಡಿ |
ಕರೆದೊಡಾಗಳೆ ಸಾಸಿರಾಳ್ಗಳು ಹೈಹಸಾದೆನುತ |
ಕರವ ಜೋಡಿಸಿ ಸೇವಿಪುದು ಮೇಂ |
ಹರಣದೆರೆಯನ ಚರಣಸೇವಾ |
ಪರಮಸಾಮ್ರಾಜ್ಯಾಭಿಷೇಕೋತ್ಸವಕೆಸರಿವಹವೆ ||೧೨೦||

ಶೀಲವತಿಯುಹಸತಿಯು ನಿಜಪತಿ ।
ಯೂಳಿಗದೆ ದೇಹವನು ತೇಯುತೆ ।
ಕಾಲಕಾಲದೊಳೊಪ್ಪುವುಸಚಾರಗಳನೊಲಿದೆಸಗಿ ॥
ಜಾಲಗೆಯ್ಯದೆ ಸಕಲಕಾರ್ಯದೊ ।
ಳಾಳಿಯುಂದದೆ ನಡೆಯೆ ಸಾಧ್ವೀ ।
ಮೌಳಿಯೆನಿಸುತಲಿಹಪರಂಗಳ ಸೂರೆಗೊಂಬುವಳು ॥೧೦೧॥

ಭಂಡದನುಜಾಧಮನೆ ನಿನ್ನಯ ।
ಗುಂಡಿಗೆಯನಿರದಿರಿವಸುಭಟರ ।
ಗಂಡ ರಿಪುಭೇರುಂಡ ರಘುಜೋದ್ದಂಡನೈತಹನು ॥
ದಿಂಡುದರಿಯುತ ನಿನ್ನಕೊಬ್ಬಿದ ।
ಖಂಡವನು ನೆರೆಕಿತ್ತು ರಕುತವ ।
ಕೊಂಡು ಭೂತಂಗಳನು ತಣಿಸುವಭೂಪನೈತಹನು ॥೧೦೨॥

ದುರುಳ ನಿನ್ನೊಡಹುಟ್ಟಿದವಳಿಗೆ ।
ಮರೆಯುದಂದದ ಗುರುತನೆಸಗುತ ।
ಖರನ ಸಂಹರಿಸಿರ್ದದಾನವಕಾಲನೈತಹನು ॥
ಧರೆಯ ಭಾರವ ತಗ್ಗಿಸುವೆನೆಂ ।
ದುರುವಭಾಷೆಯನಿತ್ತು ಮುನಿಜನ ।
ಕಿರದೆ ಕಾರ್ಯೋದ್ಯುಕ್ತನಾಗಿಹ ದೇವನೈತಹನು ॥೧೦೩॥

ಪೆರರ ಸತಿಯರಿಗೆಳುಪಿದಧಮನ ।
ಭರದಿನೊಯ್ವರು ಯಮನ ಕಿಂಕರ ।
ರುರುಳಸುವರಾಘೋರಕುಂಭೀಪಾಕನರಕದಲಿ ॥
ಅರಿಚಲಯ್ಯೋ ಎಂಬರಿಲ್ಲವು ।
ಸರಿಯಲತ್ತಿತ್ತಿರಿದು ಶೂಲದೊ ।
ಳುರಿಗೆ ನೂಕುವರರಿಯ ನೀನಿದನೆಂದಳಿಂದುಮುಖಿ ॥ ೧೨೪ ॥

ನುಡಿಯುತಿಂತಿನಿಜೆಯು ಮತ್ತೊಡ ।
ನೊಡೆಯನೈತಹದೆಸೆಯ ನೋಡುತ ।
ಸಡಿಲವಾಗಲು ಮನದಬಯಕೆಯು ಕೂಡೆ ಕಡುಜೆದರಿ ॥
ಮಡದಿಮಣಿ ಕಂಗೆಡುತ ಬಿಸುಸು ।
ಯ್ದೊಡೆಯ ಕಂಭವನೊರಗೆ ಕಾಣುತ ।
ತಡೆದೊಡೆನ್ನಯ ಕಾರ್ಯ ಕೆಡುವುದೆನುತ್ತ ರಾವಣನು ॥ ೧೨೫ ॥

ಎಲೆಗೆ ನಿನ್ನಸು ವರಿಸುವುದಕಾ ।
ಹಲವುಚೋಹವ ಧರಿಸಿ ಬಂದವ ।
ರೊಳಗದಾವನೊ ನನ್ನವೇಷವ ನೊಂದುತೈತಂದು ॥
ಫಲವನೊಂದದೆ ಪೋದಮಾತ್ರದೆ ।
ನೆಲದೊಳಗ್ಗಳನೆನಿಪರಾವಣ ।
ನಳುಕಿದನು ಧನುವೆತ್ತಲೆಂಬೆಯ ನೋಡು ಸೀನವನ ॥ ೧೨೬ ॥

ಹತ್ತುತಲೆಗಳು ತೋಳ್ಗಳಿಪ್ಪ ।
ತ್ತೆತ್ತಣದ್ಭುತಕಾಯವೀತನ ।
ನೆತ್ತಿಗೆಣ್ಣೆಯನೆತ್ತಣಿಂ ತಂದೊತ್ತಿದಳೊ ತಾಯಿ ॥
ಎತ್ತಿದಾತೋಳ್ಬೀಳದಾಗದೆ ।
ತೊತ್ತುಗಳ ಸಂದಣಿಯು ದಣಿಯದೆ ।
ಹೆತ್ತವರಿಗುಬ್ಬಸವನೀಯದೆ ಬೆಳೆದುದೇ ಶಿಶುವು ॥೧೭॥

ಎಂದುನೋಡಿದಜನದ ಕಣ್ಮನ ।
ಕೊಂದಿಸುತ ವಿಸ್ಮಯವ ಕಾರ್ಮುಗಿ ।
ಲೊಂದದೇಕೆಳೆಗಿಳದುದೆಂಬಂತೆಸೆಯುತಿದಿರಿನಲಿ ॥
ಸುಂದರಾಂಗಿಯನೊಲಿಸಲಿದು ತ ।
ಕ್ಕಂದವಾಗಿಹುದೆನುತ ಗರ್ವಿಸಿ ।
ಮಂದಮತಿಯೊಲವಿಂದೆ ನಿಂದಿರೆ ಸೀತೆ ಬೆದರಿದಳು ॥೧೮॥

ಮುಗುದೆ ನೋಡೀಗೆನ್ನ ಚೆಲುವನು ।
ಬಗೆಗಿದೊಪ್ಪಿತೆ ಪೇಳು ನಿಜವನು ।
ಬೊಗಸೆಗಣ್ಗಳ ತೃಷೆಯು ಕಳೆದುಕೊ ನೋಡಿ ಮನತಣಿಯೆ ॥
ಪುಗುತಲಳಕಾವತಿಯ ಯಕ್ಷರ ।
ಹಗರಣಂಗೊಳಸುತೆ ಕುಬೇರನ ।
ಗಗನಯಾನವನಾವಿಮಾನವ ತಂದಭಟನಾನೆ ॥ ॥೧೯॥

ಹಲವುಪರಿಯೊಳು ಶಿವನ ಭಜಿಸು |
ತ್ತೊಲಿಯುದಿರಲವನಾಗ ಕೆರಳು |
ತ್ತಲುಗಿಸಿದೆನಾರಜತಗಿರಿಯನು ತೋಳಬಲುಹಿಂದೆ ||
ಅಳುಕಿದಳು ಪಾರ್ವತಿಯು ಬಳಿಕಾ |
ನೆಳಸಿದಿಷ್ಟವನೆಲ್ಲ ಪಶುಪತಿ |
ಸಲಿಸದನು ನೀಂ ಕೇಳ್ವುದಿಲ್ಲವೆಎಂದು ಖಲನೊರೆದು ||೧೩೦||

ಧರೆಯು ಬಿರಿದತ್ತೆಂಬೊಲದನೊದೆ |
ದಿರದೆ ಝುಂಕಿಸಿ ಕರವನೀಡುತ |
ಧರಣಿಜೆಯ ಸಿರಿಮುಡಿಗೆ ಹಾಯ್ದನು ಘೋರದಾನವನು ||
ಸುರರು ನಭದಲಿ ಬೇಡಬೇಡೆಂ |
ದಿರದೆ ಕೂಗಲುಗಣನೆಗೆಯ್ಯದೆ |
ಪರಿಮಳದೆಮುಗಮುಗಿಪಜಡೆಯನು ಬಿಡದೆತುಡುಕಿದನು ||೧೩೧||

ಭೂಮಿದೇವಿಯು ಗರ್ಭಕೋಶದೊ |
ಳೀಮಹಾಸತಿಯಿರ್ದಕಾಲದೆ |
ಕೋಮಲತೆವಡೆದಿವಳಕಚಭರಕಿಲ್ಲದಿಹಕೊರತೆ ||
ಕಾಮುಕನ ಕಡುಮುಳಿರ್ದನುಜನ |
ವಾಮಕರದಾಂಕಿನಲಿ ನೊಂದುದೆ |
ಹಾಮಹಾದೇವೆನುತ ಚೀರ್ದುದು ಮೇಲೆ ಸುರಕಟಕ ||೧೩೨||

ಜಡಿದು ಮುಡಿಯನು ಸೆಳೆದು ಕೈನೆಯ ।
ನಡೆ ಭರದೆ ನಡೆಯೆಂದು ಗರ್ಜಿಸು ।
ತೊಡನೆ ತಂದನು ಕುಕ್ಕುರಿಸಿದನು ತನ್ನರಥದೊಳಗೆ ॥
ಬಡಲಕೊಂಕಿನ ನಡುಗುವಂಗದ ।
ದಡದಡಿಸುತಿಹ ಮನದ ಮಾನಿನಿ ।
ಕಡುಬಡವೆಯಾತೆರದಿನಿದ್ದಳು ರಾಮರಾಮೆನುತ ॥ ॥೧೩॥

ಮೂರನೆಯಸಂಧಿ ಸಂಪೂರ್ಣಂ.



## ೪ನೆಯಸಂಧಿ.

ಸೂ॥ ಭರದೆ ತಡೆದ ಜಟಾಯುವನು ಸಲೆ ।
ತರಿದು ರಾವಣಸೈದಿ ಲಂಕೆಯೊ ।
ಳಿರಿಸಿದನು ಸೀತೆಯನಶೋಕೋದ್ಯಾನಮಧ್ಯದಲಿ ॥

ಎತ್ತಲಿಪ್ಪೆಯೊ ರಮಣ ನೀನಿಂ ।
ದೆತ್ತಲಿಪ್ಪೈ ಲಕ್ಷ್ಮಣನೆ ಖಳ ।
ನಿತ್ತಲೆನ್ನನು ಪಿಡಿಯುತೊಯ್ವನು ನೀವದೆಲ್ಲಿಹಿರಿ ॥
ಒತ್ತಿದುದು ಮುಳ್ಳೆನ್ನಚರಣಕೆ ।
ನುತ್ತಲಾನಿರಲೆನಿತೊ ಮರುಗುತ ।
ನುತ್ತಿಕೊಂಡುಪಚಾರವೆಸಗುವ ಹಿತರದೆಲ್ಲಿಹಿರಿ ॥೧॥

ಹೆತ್ತ ತಾಯ್ತಂದೆಗಳು ಸಟೆ ನೀ ।
ನುತ್ತಮೋತ್ತಮನೆನುತೆ ನಿನ್ನನೆ ।
ಹತ್ತಿಕೊಂಡಿಹಳಲ್ಲಪೇಕ್ಷೆಯೆ ದೇವ ರಾಘವನೇ ॥
ಮಿತ್ತುವಿನ ಬಾಯ್ದುದ್ದಿತ್ತದಾಗಿಹ ।
ಮತ್ತಕಾಶಿನಿಯನ್ನುಬಿಡಿಸಲು ।
ಮತ್ತದಾವಂಗಳವು ಪುರುಷೋತ್ತಮನೆ ನೀಂ ಬಿಡಿಸಾ ।೧॥

ಕೊಂಡುಪೋಪನು ಲಂಕೆಗೆನ್ನನು ।
ಚಂಡದನುಜನು ರಾವಣನು ಕಡಿ ।
ಕಂಡವೆಸಗುತ್ತಿವನ ನೆನ್ನನದೇಕೆ ಬಿಡಿಸದಿಹೆ ॥
ಭಂಡನಿವನೇಂ ನಿನಗಸಾಧ್ಯನೆ ।
ಖಂಡಪರಶುವಿನಾ ಮಹಾಧನು ।
ಗಂಡುಗೆಡದೇ ನಿನ್ನ ವಿಕ್ರಮಚಂಡಮಾರುತಕೆ ॥೨॥

ತಂದೆತಾಯ್ಗಳನುಜ್ಞೆವಡೆಯದೆ ।
ಸಂದಮಾವನ ಬುದ್ಧಿಗೇಳದೆ ।
ಚಂದವಲ್ಲೆಂಬತ್ತೆನಾದಿನಿಯರನು ಮೀರುತಲಿ ॥
ಬಂಧುಗಳ ಕಡೆಗಣಿಸಿ ಬೇಡಕ ।
ಟೆಂದ ಪೌರರನೆಲ್ಲ ಧಿಕ್ಕರಿ ।
ಸಿಂದು ನಿನ್ನನೆ ನಂಬಿಬಂದೀತರಳೆಗೀವಿಧಿಯೆ ॥೪॥

ಅಂದು ನೀನೆಂದುದನು ಕೇಳದೆ ।
ಬಂದುದಕ್ಕನಗಿನಿತು ಶಿಕ್ಷೆಯೆ ।
ಕುಂದು ನಿನ್ನಯ ಕುಲಕಿದೆಂಬುದನಿಂದು ಮರೆದಪೆಯಾ ॥
ಸುಂದರಾಂಗನೆ ನಿನ್ನ ಸುದತಿಯು ।
ನೊಂದಳೈ ಬಲು ಬೆಂದಳೈ ನೀಂ ।
ಬಂದು ಬಿಡಿಸಾ ಸೆರೆಯನೆಂದೇಣಾಕ್ಷಿಯೊರಲಿದಳು ॥೨॥

ಬಾರೊಬಾರೋ ರಮಣ ನಿನ್ನೀ ।
ನಾರಿಯನು ಬಲುಹಿಂದೆ ದುರುಳನು ।
ಚೋರನಂದದೊಳೆಳೆದುಕೊಂಡೊಯ್ದಪನು ಪರಿಭವಿಸಿ ।
ಮೀರಿ ಭೂಮಿಯ ಕಡಲನಿವ ತಾಂ ।
ಸೇರುವನಿತರೊಳೆನ್ನ ಬಿಡಿಸೈ ।
ಸಾರಸಾಕ್ಷನೆ ಬಳಿಕ ತೃಣವೇ ಬೆಟ್ಟವಪ್ಪುದಲಾ ॥೬॥

ರಾಮ ರಕ್ಷಿಸು ಸಕಲಜಗದಭಿ ।
ರಾಮ ರಕ್ಷಿಸು ವೈರಿವಂಶವಿ ।
ರಾಮ ರಕ್ಷಿಸು ರಕ್ಷಿಸಕಟಾ ಈ ಯನಾಥೆಯನು ॥
ಪ್ರೇಮದಿಂದೊಡಗೂಡಿ ನಿನ್ನಯ ।
ನಾಮಮಾತ್ರವ ಭಜಿಸಲದು ಸು ।
ತ್ರಾಮಪದವಿಯ ಸೂರೆಗುಡುವುದೆನಿಪ್ಪನುಡಿ ಪುಸಿಯೆ ॥೭॥

ದೇವ ನಿನ್ನಯ ಪಾದಪೂಜೆಯೆ ।
ಭಾವಿಸಲ್ತನಗಖಿಲವೆಂದೇ ।
ಸೇವಿಸುತ್ತಿಹವುಡದಿಯೊಳಗಿಂತೇಕೆ ಖತಿ ನಿನಗೆ ॥
ಜೀವಿತೇಶನೆ ಬೇಗನೈದೀ ।
ಗಾವಿಲನ ಕಯ್ಯಿಂದ ಬಿಡಿಸೈ ।
ಕಾವನೇನೀಂ ಕಾಯದಿರಲಿನ್ನಾರು ಕಾವವರು ॥ ೮ ॥

ಎಲೆಲೆ ವನದಭಿಮಾನದೇವತೆ ।
ಗಳಿರ ನಿಮಗಿದೊ ಕರವಮುಗಿವೆನು ।
ಬಲುಹಿನಿಂ ರಾವಣನು ನಿನ್ನಯ ಮಡದಿ ಸೀತೆಯನು ॥
ಪಲತೆರದಿ ಬೇಡಿದೊಡವೋವದೆ ।
ಕಳವಿನಿಂ ಸೆಳೆದೊಯ್ದನೆನುತಾ ।
ಯಿಳೆಯರಮಣಂಗೊರೆವುದೌ ನೀವಲ್ಲೆಗತಿ ತನಗೆ ॥ ೯ ॥

ವನದವೃಕ್ಷಂಗಳಿರ ನೀವೆ ।
ನ್ನಿನಿಯನೈತರಲವನೊಳೊರೆವುದು ।
ತನಗೆಸಾಜವೆನಿಪ್ಪಶಕ್ತಿಯುದಿರುವಪರಿಯಂತ ॥
ದನುಜನಿಗೆ ವಶೆಯಾಗೆನೆಂದದು ।
ಕೊನೆಯನೈದುವವೇಳೆ ಸಮನಿಸೆ ।
ತನುವನೀಗುವೆನೆಂದುಮರಿಕೆಯಗೈದಳಿವಳೆನುತ ॥ ೧೦ ॥

ಅಸಿತರೊಳು ನೀಂ ಬಂದು ಬಿಡಿಸುವು ।
ದೆಸಿಸಲಾಗದು ಬೇರೆಪರಿಯನು ।
ಜನಕರಾಜರ್ಷಿಯೊಳು ಜನಿಸಿದಳೆನಿಸಿಕೊಳುತಿಹೆನು ॥
ಮನದೆಸಂಶಯಕೆಡೆಯನಿತ್ತೊಡೆ ।
ಮನುಕುಲೇಶನೆ ಸತ್ವಗುಂದುತ ।
ಉಣುವ ಘನವಾಗೆಣಿಸಿ ಮಾಳ್ಪುದನುಳಿವೆ ಬೇಸರದೆ ॥೧೧॥

ತನ್ನ ಪಾತಿವ್ರತ್ಯವಹ್ನಿಗೆ ।
ನಿನ್ನಸಾಹಸವೆಂಬಮಾರುತ ।
ನನ್ನು ಸೇರಿಸಿ ದಹಿಸು ದಾನವವಂಶಕಾನನವ ॥
ಗನ್ನಗತಕವಿದಲ್ಲನಂಬುವು ।
ದೆನ್ನನುಡಿಗಳನೆನುತ ಸೀತೆಯು ।
ಬಿನ್ನವಿಸಿದಳು ಕರವಜೋಡಿಸುತೆನ್ನಿನುತ್ಪ್ರತಿಗೆ ॥೧೨॥

ಇಂತು ಹಲವಂಗದಲಿ ಹಲುಬುತ ।
ಕಾಂತನಾಮಸ್ಮರಣೆಮಾಡುವ ।
ಕಾಂತೆಯನುಕೊಂಡಂತರಿಕ್ಷದೆ ಪೋಪರಾವಣನ ॥
ಮುಂತೆವೃಕ್ಷದತುದಿಯೊಳಿದ್ದ ಸ ।
ಮಂತು ನಿಟ್ಟಿಸುತಾಜಟಾಯುವು ।
ಜೆಂತೆಯೊಂದುತಲಾಗ ತಡೆದನು ನುಡಿಸಿದನು ಖಳನ ॥೧೩॥

ಏನಿದಕ್ಕಟ ವಿಶ್ರವಸ್ಸನ ।
ಸೂನುವೇ ಕಥೆಗಳಲಿ ನಿನ್ನನು ।
ದಾನಿ ಬಹುಧರ್ಮಾತ್ಮನೆಂದೊರೆವುದನು ಕೇಳ್ದಹೆನು ॥
ದಾನವೇಶ್ವರನೆನಿಸುತೀಪರಿ ।
ಮಾನಹೀನನವೋಲಕಾರ್ಯವಿ ।
ದೇನನೆಸಗಿದೆ ಮೂರುಲೋಕದ ವೀರಗಿದು ಸರಿಯೆ ॥೧೪॥

ಎಲವೊ ನೀನಿಂದಿವಳನಾರೆಂ ।
ದೊಲಿಸಲಿಚ್ಛೈಸಿಂತು ಕಪಟವ ।
ಬಳಸುತೀಪರಿ ಪಿಡಿಯುತೊಯ್ವೈ ನಿನಗೆ ತೀರುವುದೇ ॥
ಹಲವುಲೋಕವ ಸೃಜಿಸಿ ಸಲಹುತ ।
ವಿಲಯವೆಸಗುವನಾದಿಪುರುಷನ ।
ಲಲನೆಯೊಲಿವಳೆ ಪಾಪಿ ತೆಗೆ ನಿನಗೇಕೆ ದುರ್ವ್ಯಸನ ॥೧೫॥

ಅರಸನೆನಿಪವನಾತ್ಮಧರ್ಮಕೆ ।
ಕೊರತೆ ಬಾರದತೆರದೆ ನಡೆವುದು ।
ಪರಸತಿಯರನು ನಿಜಸಹೋದರಿಯರವೊಲಾದರಿಸಿ ॥
ಧರೆಯ ಪಾಲಿಪುದಿದುವೆ ನೀತಿಯು ।
ಮರೆತು ನೀನಿದನಿಂತು ಕಾಮುಕ ।
ರೆರೆಯನಾಗುತ ಲೋಕಮಾತೆಯೊಳೆರಡನೆಣಿಸಿದೆಯಾ ॥೧೬॥

ನಿಲಿಸು ರಥವನ್ನಿಳಿಸು ಮಾತೆಯ ।
ಖಲನೆ ನಾನಾರೆಂಬುದರಿಯೆಯ ।
ಬಲುಮೆಯೊಂದಿದ ಗೃಧ್ರರಾಜನು ನಾಂ ಜಟಾಯುಕನಾ ॥
ಕಲಕುವೆನು ನಿನ್ನೊಡಲ ರಕುತವ ।
ನೆಲವೊ ನನಗಿದಿರಾಗು ನಿನ್ನಯ ।
ಹಲವು ತಲೆಗಳಗಾನುಬೆದರೆನು ನೋಡು ತನ್ನದಟ ॥೧೭॥

ಎನುತ ಪಾರುತ ನಭಕೆ ತನಗು ।
ಳ್ಳನಿತು ಶಕ್ತಿಯನಾಂತು ರಥವನು ।
ಹಣಿದವಾಡುವೆನೆನುತ ರೆಕ್ಕೆಯೊಳೆರಗುತಪ್ಪಳಿಸೆ ॥
ಝುಣಝುಣಧ್ವನಿಗೈದು ಘಂಟೆಗ ।
ಳೆಣಿಸಲಸದಳವಾಗಲುದುರಿದು ।
ವಣಿಯುರಂಕೆಟ್ಟಳಕವಾದುವು ರಥದ ಕೀಲುಗಳು ॥೧೮॥

ಜೋತತೊಂಡೆಯುಪಕ್ಷಿ ವಾಯಸ ।
ವಾತುರದೊಳೆರಗುತ್ತ ಶಬರನ ।
ನೂತನದ ಬಲೆಗಿರದೆ ಸಿಲುಕಿದತೆರದೊಳೀದಿನದಿ ॥
ಸೀತೆಯನು ಬಯಸುತ್ತ ತನ್ನೀ ।
ಘಾತಕೆಡೆಯಾಗುತ್ತಲೊರಗುವ ।
ರೀತಿಯೊದವಿತು ನಿನಗೆ ಕೊಳ್ಳೆಂದೆನುತ ಕೊಕ್ಕಿನಲಿ ॥೧೯॥

ಕುಕ್ಕುತಾತನ ತನುವ ರಕುತವ ।
ದುಕ್ಕುವಂದದಿ ಬಗಿದು ಕಾಲ್ಗಳಿ ।
ನಿಕ್ಕಿ ಸೂತನ ಕೊಂದು ರಥವಾಜಿಗಳ ಖಂಡಿಸಲು ॥
ಪಕ್ಕಿಗೇನೀಪೌರುಷವೆನು ।
ತ್ತಕ್ಕಜಂಗೊಂಡಾಗ ಖಳ ದು ।
ವ್ರಿಕ್ಕಿ ಧಾರಿಣಿಗಿರದೆ ಧನುವಿಂಗಸಮಬಾಣವನು ॥ ೨೦॥

ಅಳವಡಿಸುತೆಸೆಯಲ್ಕೆ ತಾನದ ।
ಕಳಕದಾಗಳೆ ಬೀಸಿ ರೆಕ್ಕೆಯ ।
ಕೆಲಕೆ ಜಾರಿಸುತಂದುಮುಂದೆಡೆ ಬಂದ ಬಾಣವನು ॥
ತಲೆಯ ಮೇಲಣ ಮಕುಟವೆಲ್ಲವು ।
ನೆಲಕೆ ಬೀಳ್ವವೊಲೊದೆದು ಜೆನ್ನೊಳು ।
ಕುಳಿತು ಮಂಡೆಯನಿರದೆ ಕೊಕ್ಕಿಂಕುಕ್ಕಿ ಗಾಸಿಸಲು ॥ ೨೧॥

ಬದರಿದನು ಬೆನ್ನಿಂದ ಪಕ್ಷಿಯ ।
ನಿದನುಪೇಕ್ಷಿಸಲಾಗದೆನುತವೆ ।
ಬದಿಯ ಕಡುಗವ ಸೆಳೆದು ರೆಕ್ಕೆಗಳೆರಡನುರೆ ತರಿಯೆ ॥
ಪದುಮನಾಭನೆ ರಾಮ ಸಲಹೆಂ ।
ದೊದರುತುರುಳಿದನಾಜಟಾಯುವು ।
ಬೆದರುತಂಗನೆ ಚೀರ್ದು ಬೈದಳು ನಿಜಪುರಾಕೃತವ ॥ ೨೨॥

ಏನಿದಕಟೀಗೆನ್ನದೃಷ್ಟವು ।
ಹೀನಭಾಗ್ಯೆಯುನಿಂದು ರಕ್ಕಿಸ ।
ಲೀನಭಸ್ಸ್ಥಲಗಾಮಿ ಯತ್ನಿಸುತಸುವ ನೀಗುತಿದೆ ॥
ಪ್ರಾಣನಾಥನನುಳಿದ ಸುದತಿಗೆ ।
ಹಾನಿಯುಲ್ಲದೆ ಲೇಸುಬಪ್ಪುದೆ ।
ದೀನೆಯಾದೆನಗೇನುಗತಿ ಯೆಂದಬಲೆಯೊರಲಿದಳು ॥ ೭೩॥

ಪರಮಮಿತ್ರನೆ ಪಕ್ಷಿರಾಜನೆ ।
ದುರಿತವತಿಗೆನಗಾಗಿ ನೀನೀ ।
ಪರಿಯಕಷ್ಟಕೆ ಗುರಿಯೆನಿಸಿದೈ ಮರೆಯೆ ನಾಸಿದನು ॥
ಪರಮಪುರುಷನು ರಾಮಚಂದ್ರನು ।
ಬರುವನಿಲ್ಲಿಗೆ ಮರೆಯದೆಲ್ಲವ ।
ನರುಹುತವನ ಹಸಾದವಾನುತೆ ಮೋಕ್ಷಸುಖಿಯಾಗು ॥ ೭೪॥

ಎನುತ ಪೇಳ್ವನಿತರೊಳು ಖಳನಾ ।
ವಸಿತೆಯನು ಮುಡಿವಿಡಿಯುತೆತ್ತಿ ।
ತ್ತನಿಲವೇಗದೊಳಡರಿ ನಭವನು ಮುಂದೆ ಪೋಗುತಿರೆ ॥
ಅನುಪಮಾನಶರೀರದಿಂದಲಿ ।
ಘನತರಾದ್ರಿಯ ಕೋಡುಗಲ್ಗಳ ।
ನನುಕರಿಪತೆರದಿಂದ ಕುಳಿತಿಹ ಕಪಿಗಳೈವರನು ॥ ॥ ೭೫॥

ಸುದತಿ ಕಾಣುತ ತನ್ನ ಮೇಲಣ ।
ಹೊದಕೆಯುಂಚನು ಗೀಳುತದರೊಳು ।
ಹುದುಗಿಸುತ ತೊಡವುಗಳನಾಗಳೆ ಕಟ್ಟಿಪೊಟ್ಟಳವ ॥
ಸದಯರೇ ನೀವಿದನುಕೊಳ್ಳುವುದು ।
ಹೃದಯವಲ್ಲಭರಾಮನೈತರೆ ।
ಮುದದೊಳರುಹುವುದೆನ್ನವಸ್ಥೆಯನೆನುತಲವರೆಡೆಗೆ ॥೨೬॥

ಎಸೆಯಲದನವರಾಂತು ಕಡುಬೆ ।
ಕ್ಕಸವನಾಸುತಲೆವೆಯನಿಕ್ಕದೆ ।
ಯಸುರಚೇಷ್ಟೆಯ ನೋಡುತಿರ್ದರು ಮರುಗಿ ಮನದೊಳಗೆ ॥
ಶಶಿವದನೆಯಿನ್ನೇಂ ತನಗೆಕೈ ।
ಬಸವೆಾದಂತಾಯ್ತೆನುತಲಸ ।
ವಸದಿ ಪೋಗುತ ಕಾಣದಾದನು ದನುಜಪತಿಯಿದನು ॥೨೭॥

ತೆರಳುತೀಪರಿಯಿಂದೆ ಕೆಳಗಡೆ ।
ಮೆರೆವಪಂಪಾಸರವ ದಾಂಟುತ ।
ಪರಿಪರಿಯ ವನಪರ್ವತಂಗಳನೆಲ್ಲ ಪಿಂದುಳುಹಿ ॥
ಧರೆಯಭಾಗವನೆಲ್ಲ ಕಳೆಯುತ ।
ತರತರದೊಳೊಪ್ಪುತಿಹ ತೆರೆಗಳ ।
ನುರುಭಯಂಕರವಾಗಿ ಭೋರ್ಗರೆಯುತ್ತೆ ರಂಜಿಸುವ ॥೨೮॥

ಶರಧಿಯನು ಕಂಡದರಮಧ್ಯದೆ ।
ಮೆರೆವ ಕೋಟೆಗಳಿಂದ ಸುರನರ ।
ವರರಿಗಸದಳಪುಗುವೊಡೆಂಬವೊಲೆಸೆವಲಂಕೆಯನು ॥
ಹರಿಸದಿಂದೊಳವೊಕ್ಕು ಲಕ್ಷ್ಮೀ ।
ಸುರುಚಿರಾವಳಮುಖವು ದಿಟವಿದು ।
ಕೊರತೆಯೇನಿದಕೆಂಬವೊಲ್ಮೆರೆವರಮನೆಯನೈದಿ ॥೨೯॥

ನಿರುಪಮಾಂತಃಪುರವ ಸೇರುತ ।
ಕರೆದು ಭೂತಾಕೃತಿಯ ವದನದ ।
ಪರಿಚರಿಯದಸುರಿಯರ ಸೀತೆಯಸೇವೆಗನುಗೊಳಿಸಿ ॥
ಸರಸಿಜಾನನೆಯಾಣತಿಯನುರೆ ।
ಸಿರದೊಳಾನುತ ನೀವು ನಡೆವುದು ।
ಕೊರತೆಯಿನಿಸುಂ ಮನಕೆತೋರದತೆರದೆ ಸೇವಿಪುದು ॥೩೦॥

ತನಗಿವಳನೊಡಗೂಡಿಸುವುದೇಂ ।
ಘನದಕಾರ್ಯವು ನಿಮಗದೆನಿಬರೊ ।
ವನಿತೆಯರ್ಕಳನೊಲಿಸಿ ನೆರಪಿದ ಚದುರೆಯರುನೀವು ॥
ಎನುತ ನೇಮಿಸಿ ಸಭೆಗೆ ನಡೆತಂ ।
ದನಿತುಮಂ ತಾನೆಸಗಿದಕೃತವ ।
ನಿನಿಸು ಹೇಸದೆ ಸಚಿವಮುಖ್ಯರಿಗೊರೆದು ತವಕದಲಿ ॥೩೧॥

ಬರಿಸಿ ತನಗತ್ಯಾಪ್ತಗೆನಿಸುವ ।
ದುರಳರಕ್ಕಸರೆಂಟುಮಂದಿಯ ।
ನೊರೆದನವರೊಡನಾ ಜನಸ್ಥಾನದಲಿ ರಾಘುವನು ॥
ಚರಿಸುವನು ಸೋದರನ ವೆರಸುತೆ ।
ಮರೆಸಿ ನೀವಲ್ಲಿರುತೆ ನಡೆವಾ ।
ಚರಿಯುವೆಲ್ಲವನೆನಗೆ ಲೇಖನಮುಖದೆ ತಿಳಯಿಸುತ ॥೩೦॥

ಸಮಯವೀಕ್ಷಿಸುತವರ ಕೊಲುವಾ ।
ಕ್ರಮವ ಯೋಚಿಸುತಿರ್ಪುದೆನುತೊರೆ ।
ದಮಿತವಾದುಡುಗೊರೆಯನಿತ್ತವರುಗಳ ಬೀಳ್ಕೊಟ್ಟು ॥
ಸುಮಶರಂಗಳು ನಾಂಟೆ ಹೃದಯವ ।
ನಮವ ಕಡುಬೆಮೆಗೊಂಡು ಕುಮತಿಯು ।
ಕಮಲಲೋಚನೆಯೆಡೆಗೆ ಬಂದನು ನುಡಿಸಿದನು ಸತಿಯ ॥೩೩॥

ಎಲೆಗೆ ಸೀತಾಲಲನೆ ನಿನ್ನಯ ।
ಚೆಲುವಿಗೆನ್ನಸು ಸೂರೆವೋದುದು ।
ಸಲೆ ಕಟಾಕ್ಷವ ಬೀರುತೆನ್ನನು ಕರುಣದಿಂದುಳುಹು ॥
ಬಲವಿಹೀನನನಂಗನಿಂದೀ ।
ಬಲನಿಧಾನನೆನಿಪ್ಪ ದಶಶಿರ ।
ಗಳವು ತಾನೆನೆ ಜಗವು ನಗುವುದು ಮಾಣಿಸಿದನೊಲಿದು ॥೩೪॥

ಕ್ಷಿತಿಜೆ ನಿನ್ನಯ ಚರಣಕಮಲ |
ಕ್ಕತಿಶಯುವೆನಿಪ್ಪೆನ್ನ ಮಕುಟವ |
ನತುಳಪಾದುಕೆಗೈದು ಪೂಜಿಪೆನನುದಿನದೊಳದನು ||
ಅತನುಹತಗೆನಗಿಂದು ಸುಖಸಂ |
ತತಿಯನೊದವಿಪ ನಿನ್ನಸಂಗವ |
ಹಿತದೆ ಕರುಣಿಸಿ ಕಾಯಬೇಕೆಂದೆರಗಿದನು ಪದಕೆ ||೩೫||

ಕೇಳುತಿರ್ದಳು ಸುದತಿಯಾತನ |
ಕೀಳುನುಡಿಗಳ ಕೆರಳಿದಳು ಛಡ |
ಖೂಳ ನೀನಿಂತೇಕೆ ಗಳಹುವೆ ಸಾವ ಲೆಕ್ಕಿಸದೆ ||
ಸಾಲುತಲೆಗಳು ನಿನ್ನವಿವು ಭೂ |
ಪಾಲರಾಮನ ಬಾಣವಹ್ನಿ |
ಜ್ವಾಲೆಗಾಹುತಿಯೆನಿಸದುಳಿವುವೆ ಕಾಣೆ ನೀನಿದನು ||೩೬||

ಎಂದುನುಡಿವಾಸತಿಯ ಬಿರುನುಡಿ |
ಗಂದು ದಶಕಂಧರನು ಮುಳಿಯುತ |
ಲೆಂದನಾಕಾಹಿನ ದನುಜೆಯರಿಗಿಂದಿವಳನೊಯ್ದು ||
ಬಂದಿಯೊಳಗಿರಿಸುತ್ತಶೋಕೆಯ |
ನಂದನದೊಳುರುಭಯುವ ಪುಟ್ಟಿಸು |
ತೊಂದಬುದಪರಿಯಂತ ಕಾದಿಹುದನಿತರೊಳಗಿವಳು ||೩೭||

ಬಲಿದರೊಳ್ಳಿತನೊಂದಿ ಸುಖಿಸುವ ।
ಳೊಲಿಯದಿರೆ ಮರುದಿನವೆ ಮಾರಿಗೆ ।
ಬಲಿಯಹಳು ಖಂಡಿತದನುಡಿ ಯಿಂತಿದಕೆ ಕವಡಿಲ್ಲ ॥
ಸಲಿಗೆಯಾನುಡಿಸಲ್ಲದಿವಳೊಳು ।
ಕಲುಮನದ ಕಡುಸೊಕ್ಕಿನಿವಳನು ।
ಬಲುಹಿನಿಂ ಬಸಗೊಳಿಪುದೆಂದೊದರುತ್ತೆ ತೆರಳಿದನು ॥೨೮॥

ಬಡನೆ ಬಂದುದು ದಡಿಗರಕ್ಕಸಿ ।
ಗಡಣವೀಕೆಯ ಮುತ್ತಿಕೊಂಡುದು ।
ನಡೆನಡೆಯೆನುತ್ತಟ್ಟುತಾರ್ಭಟಿಸುತ್ತೆ ಬೆದರಿಸುತೆ ॥
ಮಡದಿ ಗಡಗಡನಡುಗುತಡಿಯಿಡು ।
ತೊಡೆಯುನಹರಘುರಾಮನಡಿಗಳ ।
ಬಿಡದೆ ನೆನೆಯುತೆ ಪೋಗಿಕಾಲವ ಕಳೆದಳಾಬನದೆ ॥೨೯॥

ನಾಲ್ಕನೆಯ ಸಂಧಿ ಸಂಪೂರ್ಣಂ.



# ೫ನೆಯ ಸಂಧಿ.

---

ಸೂ|| ವರರಘುಜನಂಸುತ್ತೆ ಸೀತೆಯ |
ಸುರುವನವಿ ಕಂಡಾಜಟಾಯುವ |
ನರಿಕಬಂಧನನರಿದು ಮಾತಂಗಾದ್ರಿಗೈದದನು ||

ಇರಲು ಲಕ್ಷ್ಮಣನಿತ್ತ ಸೀತೆಯ |
ಬಿರುನುಡಿಗೆ ಮರುಮರುಗಿ ಮನದೊಳು |
ತೆರಳುತಣ್ಣನಕಡೆಗೆಕಾನನದೊಳಗೆ ಪೋಗುತಿರೆ ||
ದುರುಳದನುಜನು ಹರಣವಿಡುವಾ |
ಗೊರಲಿದಾನುಡಿಗಂಜಿ ರಾಘುವ |
ನರರೆ ತನ್ನವರಿದನು ಕೇಳ್ದೊಡದೇನಗೈದಪರೊ ||೧||

ಎಂಬಸಂಶಯವಡರೆ ಮನವನು |
ಹಂಬಲಿಸಿ ತೊಳಲುತ್ತ ವನನಿಕು |
ರುಂಬವನು ನಿಮಿಷದಲಿ ದಾಂಟಿ ಬರುತ್ತಮಿದಿರಿನಲಿ ||
ಕಾಂಬರಾರೆಂದೊತ್ತಿ ನೋಡು |
ತ್ತಂ ಬರುವವನೆ ತಮ್ಮನೆಂದರಿ |
ದಂಬುಜಾಕ್ಷನು ದುಗುಡದಿಂ ನುಡಿಸಿದನು ಲಕ್ಷ್ಮಣನ ||೨||

ಏನಿದೇನೈ ತಮ್ಮ ನಿನ್ನನ
ವೀನವೆನಿಸಿದರೀತಿ ನೀನೆ ।
ನ್ನಾಣತಿಯ ಮೀರ್ದಿಲ್ಲಿಗೈದಿಹೆ ಸೀತೆಯೆಲ್ಲಿಹಳು ॥
ಕಾನನದೊಳೇಂಬರುತಿರ್ಪಳೆ ।
ಕಾಣಿಸಳು ತನಗೇಕೆ ನಿನ್ನಯ ।
ದೀನವದನವ ನೋಡೆಕಳವಳವಹುದು ಮಾನಸಕೆ ॥ ೩ ॥

ತಮ್ಮ ನೀಂ ಪರಮಾಪ್ತನೆಂದರಿ ।
ದೊಮ್ಮೆ ಮಡದಿಯ ನಿನ್ನ ಬಳಿಯೊಳ ।
ಗುಮ್ಮಹದೆ ಬಿಡಲಿಂತುಪೇಕ್ಷಿಸುತವಳನುಳಿಯುವದು ॥
ಸಮ್ಮತವೆ ನಿನಗೆಮ್ಮೊಳೀಪರಿ ।
ದುಮ್ಮನದ ವೈಷಮ್ಯವಕಟಾ ।
ಉಮ್ಮಳಕೆ ಗುರಿಮಾಳ್ಪುದೇನಿದು ಬಿನದವೇಪೇಳಾ ॥ ೪ ॥

ದೇಶಕೋಶವನುಳಿದು ಪೆತ್ತರೊ ।
ಳಾಶೆಯನು ಮಿಗೆ ತೊರೆದು ತನಗೆ ನಿ ।
ಜೇಶನೇಗತಿಯೆಂದು ನಂಬುತ್ತೆನ್ನ ಪಿಂದೈದಿ ॥
ಲೇಶಮಾತ್ರವು ಘೋರವಿಪಿನ ।
ಕ್ಲೇಶಕಂಜದೆ ಭೂರಿಸುಗುಣಾ ।
ವೇಶದಿಂ ಮೆಚ್ಚಿಸಿದಮಡದಿಗಿದಲ್ತೆ ಉಡುಗೊರೆಯು ॥ ೫ ॥

ಖರನ ಸಂಹರಿಸಿದುದೆ ಮೊದಲಾ ।
ಗಿರದೆ ನಮ್ಮೊಳು ಬಹುಳವೈರವ ।
ಧರಿಸುತಸುರರು ಸಮಯವೀಕ್ಷಿಸುತಿರ್ಪರೆಂಬುದನು ॥
ಅರಿಯುದನೆ ನೀನೆನಗೆ ಬುದ್ಧಿಯು ।
ನೊರೆಯೆಯಾ ನಾಂಬರ್ಪಕಾಲದೊ ।
ಳರರೆಸಿನಗಿಂದಂಥಕಾರವದೆಂತು ಸಮನಿಸಿತು ॥ ೬ ॥

ಮನಕೆ ಸಂಶಯವಾಗಿ ತೋರ್ಪುದು ।
ಜನಕತನುಜೆಯು ಕುಶಲದಲ್ಲಿಯೆ ।
ಮನೆಯೊಳವಳನು ಕಾಂಬೆವೋ ಮೇಣಾಕ್ಕಣದಳಲುವೆವೋ ॥
ವನಿತೆಯಾವ್ಮೃದುತನುವಿಗೆಳಸುತೆ ।
ದನುಜರವಳನು ಮುರಿದು ತಿನ್ನುತ ।
ತಣಿವ ನೊಂದದೆ ಮಾಣರೇಗುವೆನಿದಕೆ ತಾನಿಂದು ॥ ೭ ॥

ವಾದವೇತಕೆ ಲಕ್ಷ್ಮಣನೆ ನೀ ।
ನೈದುವಾ ಸಮಯದಲಿ ತಾನಾ ।
ಮೇದಿನೀಸುತೆ ಸುಖದೊಳರ್ದಳೆ ತಳರಮಂದಿರದೆ ॥
ಸೋದರನೆ ಕೃಪೆಯೆತ್ತ ಪೋಯಿ ।
ತ್ತಾದುದೇನನಿವಾರ್ಯವಾಕೆಯೊ ।
ಳೀದುರಾಗ್ರಹಕೇಂ ನಿಮಿತ್ತವು ಪೇಳು ವಹಿಲದಲಿ ॥ ೮ ॥

ಏತಕಿನ್ನಕಟೆನ್ನ ಬಾಳಿಕೆ ।
ಬೀತತರುತಾನಾದೆನ್ನೈ ನನ ।
ಗಾ ತಳೋದರಿಯಿಲ್ಲದಿರೆ ಪೆರತುಂಟೆ ಜೀವನವು ॥
ಧಾತುಗೆಟ್ಟೆನು ತಮ್ಮ ನೀನಿ ।
ನ್ನೇತಕೀಬಳಿಯಿರ್ಪೆ ವರಸಾ ।
ಕೇತಪುರಿಗಿರದ್ಯೆದಿ ಭರತನಕೂಡಿ ನೀಂ ಬದುಕಂ ॥೯॥

ಮುಳಿಸು ನಿನ್ನೊಳಗಿಲ್ಲ ಪೂರ್ವದೆ ।
ಗಳಸಿದುದನಿಂದುಷ್ಟೆನೆನಗಾ ।
ಗಳಲದಿರು ಶುಭಮಕ್ಕೆ ಮಾರ್ಗದೊಳೆನಲು ರಾಘವನು ॥
ಪಳಪಳನೆ ಕಂಬನಿಯ ಧಾರೆಗ ।
ಳಿಳೆಗೆ ಸುರಿಯಲು ಲಕ್ಷ್ಮಣನ ಮನ ।
ದೊಳಗೆ ಶೋಕಾನಳವು ಪೊಕ್ಕುದು ಸುಟ್ಟುದವಯವವ ॥೧೦॥

ಮರೆದನಂಗವನೊಡನೆ ಕೆದರಿದ ।
ಕರಣವೊದಲಂತಾಗಲಂಜುತ ।
ಕರವ ಜೋಡಿಸಿ ಬಿನ್ನವಿಸಿದನು ಗದ್ಗದಸ್ವರದೆ ॥
ಬರೆಯುಲೇನನು ದೇವ ಚಿತ್ತ ।
ಕ್ಕರಿಕೆಯಿಲ್ಲದುದುಂಟೆ ರಕ್ಕಸ ।
ನೊರಲಿದಾರ್ತಧ್ವನಿಯೆ ಕಾರಣವೆನ್ನ ಬರವಿಂಗೆ ॥೧೧॥

ಮೋಸವೀನುಡಿ ತಾಯೆ ಮಹಿಮಾ |
ವಾಸರಾಮಂಗಿಲ್ಲಪಾಯವು |
ಲೇಸ ಕಾಂಬಿರಿ ನಿಮಿಷ ಸೈರಿಪುದೆನುತ ನಾನುಸಿರೆ ||
ಭೂಸುರಾಂಗಿಗೆ ನಿಮ್ಮೊಳಹ ವಿ |
ಶ್ವಾಸವೇ ಗಾಢಾಂಧತೆಯುನಿ |
ತ್ರೇಸುಬೇಡಿದೊಡೈಸು ನಿಷ್ಫಲವೆನಿಸಿತೆಲ್ಲವನು ||೧೨||

ಪೋಗುಪೋಗೆಂದೆನ್ನನಟ್ಟುತ |
ಮೇಗುಕೀಳಾವುದನು ನೋಡದೆ |
ಬಾಗುಳದೆ ಹುಲುನರರಿಗೊಪ್ಪುವ ಕೀಳುನುಡಿಗಳಲಿ ||
ಬೇಗುದಿಯನೆನಗಿತ್ತರದರಿಂ |
ಬೇಗ ಬಂದೆನು ದೇವ ಕರುಣಾ |
ಸಾಗರನೆ ಕೃಪೆದೋರಿ ಮನ್ನಿಪುದೆನ್ನ ನೀನೆನಲು ||೧೩||

ಮಾರಿ ತನ್ನಯ ನೇಮವನು ಕಾ |
ಯ್ದೇರಿ ಬಂದುದದೊಂದು ಮೇಣವಿ |
ಚಾರೆಯೆನಿಪಾ ಮಾನಿನಿಯ ಮಾತಿಂಗೆ ಮತಿಗೆಟ್ಟು ||
ಕ್ರೂರದಾನವರಿರ್ಪ ಕಾಡೊಳ |
ಗಾರುಸಾಹಾಯಕರುಮಿಲ್ಲದ |
ನಾರಿಯೊಬ್ಬಳ ಬಿಟ್ಟು ಬಂದಾ ತಪ್ಪುತಾನೊಂದು ||೧೪||

ಇಂತು ನೀನಪರಾಧವೆರಡಂ ।
ಭ್ರಾಂತಿಯಿಂದಲಿ ಗೈದೆ ನಿನ್ನನೆ ।
ಸಂತತವು ನಂಬಿರ್ದನವ್ಮೊಳಗಿಂತದೇಕಾದೆ ॥
ಚಿಂತೆಯೊಂದಿರೆ ದೇವಿಯಾಕೆಯು ।
ಸಂತವಿಸುತಲ್ಲಿಪ್ಪುದನು ಬಿಸು ।
ಟೆಂತುಟಾದೊಡವಾಗಲೆಂದುಳಿದಕಟ ಬರಬಹುದೇ ॥೧೫॥

ಎಂದು ದುಃಖಿಸುತಾಡಿದಣ್ಣನಿ ।
ಗೆಂದನಾ ಸೌಮಿತ್ರಿ ಲಾಲಿಪು ।
ದಿಂದುವದನೆಯು ನಿಷ್ಠುರೋಕ್ತಿಯ ಕೇಳ ಜೀವಿಪರೆ ॥
ಇಂದು ಮತ್ಪ್ರಿಯನಳಿದೊಡೆನ್ನಸು ।
ಹೊಂದುವಿಚ್ಛೆಯೊಳಗಲದಿರ್ಪೆಯ ।
ಕೊಂದುಕೊಂಡಪೆನಲ್ಲದುಳಿಯೆನೆನುತ್ತ ವಾಚಿಸಲು ॥೧೬॥

ಒಡೆದುದೆನ್ನೆದೆ ಬಳಿಕ ಬೇಡಿದೆ ।
ನೊಡತಿ ಮನ್ನಿಪುದೆನುತಮಲ್ಲಿಂ ।
ದುಡುಕಿನಿಂದೈತಂದೆ ನಾಂ ಭವದೀಯಸನ್ನಿಧಿಗೆ ॥
ತಡೆಯಲಸದಳವಾದ ನುಡಿಗೇ ।
ಳ್ದೆಡೆಯೊಳೆಂತಿಹಃದಣ್ಣ ದೇವನೆ ।
ನುಡಿಯಲಂಜುವೆನೆನ್ನ ದೋಷವ ಮರೆದು ನೀಂ ಸಲಹು ॥೧೭॥

ಎನುತೆಯಾಡಿದ ಲಕ್ಷ್ಮಣನ ನುಡಿ ।
ಗಿನಕುಲಾಧಿಪನಿರದೆ ಮನ್ನಿಸಿ ।
ವನದೆ ನಡೆದನು ವಾಯುವೇಗದೊಳೆಲೆವನೆಯ ಕಡೆಗೆ ॥
ಜನಕಜೆಯ ಬಾಗಿಲೊಳು ಕಾಣದೆ ।
ಮನಕೆ ಸಂಶಯುವಾಗಲೊಡನೆಯೆ ।
ಘನವಿಷಾದವನಾಂತು ನಿಲಯುವ ಪುಗುತ ಹುಡುಕಿದನು ॥೧೮॥

ಕಾಣಲಿಲ್ಲವು ತನ್ನಸತಿ ಬಳ ।
ಕಾಣೆಯಿಕ್ಕುತ ಕೂಗಿದನು ಮ ।
ತ್ಪ್ರಾಣವಲ್ಲಭೆ ಮಾತನಾಡೆಯದೇತಕೆಲ್ಲಿರುವೆ ॥
ಕೇಣವನು ಬಿಡು ಹುಲ್ಲೆಯಿದೆಕೊ ।
ಳ್ಳೇಣಲೋಚನೆ ಬೇಗ ಬಾ ನಿ ।
ನ್ನಾಣತಿಯ ಮೀರುವನೆ ರಾಮನಿದೇಕೆ ತಡಗೈವೆ ॥೧೯॥

ಅಸುರರಂಜಿಕೆಗವಿತುಕೊಂಡೆಯೊ ।
ಅಸುರಮರ್ದನನಿದೆಕೊ ಬಂದಿಹೆ ।
ನೊಸಗೆಯಲ್ಲವೆ ಸತಿಯುರಗ್ರಣಿಗಿನಿಯನಾಗಮನ ॥
ಬಸಿದು ಬೀಳುವ ನಿನ್ನ ಮಮತಾ ॥
ರಸವದೋಪನೊಳಂಗಿಪೋದುದೆ ।
ಬಸಿರಶಿಖಿ ಬಲುಹಾಯ್ತು ತೋರಿಸು ಮೊಗವ ಶಶಿವದನೆ ॥೨೦॥

ಸುತ್ತಿ ಕೂಗಿದುದಾಯ್ತು ಮನೆಯೊಳ ।
ಗೆತ್ತಲುಂ ಜಾನಕಿಯ ಸುಳವಿ ।
ಲ್ಲೆತ್ತ ಪೋದಳೊ ಕಾಣಲೊಲ್ಲಳು ಚಿತ್ತವಲ್ಲಭೆಯು ॥
ಚಿತ್ತದಾಸರ ಕಳೆಯಲುಪವನ ।
ದತ್ತಲೈದಿರಬೇಕು ಲಕ್ಷ್ಮಣ ।
ಮತ್ತಕಾಶಿನಿಯಿಪ್ಪೆಡೆಯ ನೀಂ ಗೊತ್ತುಗೈಯೆನಲು ॥ ೨೧॥

ತಾನು ಗೈದವಿವೇಕದಿಂದೀ ।
ಹಾನಿಯಣ್ಣಂಗಾಯ್ತು ಶಿವಶಿವ ।
ಹೀನಭಾಗ್ಯನು ಧರೆಯೊಳೆನಗೆ ಸಮಾನರಾರಿಹರು ॥
ಮಾನಿನಿಯ ಕುಶಲದೊಳೆ ಸಂಶಯ ।
ವೇನಮಾಡುವೆನಿನ್ನು ಮುಸುಕಿದ ।
ಕಾನನಂಗಳನೆಲ್ಲ ಶೋಧಿಪೆನೆನುತ ಲಕ್ಷ್ಮಣನು ॥ ೨೨॥

ಹೂವನಂಗಳೊಳರಸಿದನು ಗೋ ।
ದಾವರಿಯ ತಡಿಗಳಲಿ ಕೂಗಿದ ।
ನಾವನಜಹತಿಯೊಗೆದ ಸರಗಳನೆಲ್ಲ ಬಳಸಿದನು ॥
ಆವೆಡೆಯೊಳಂ ಕಾಣಳನ್ನೇ ।
ಗೈವೆನೆಂದೆಲೆವನೆಗೆ ಮರಳುತ ।
ದೇವ ಚಿತ್ತೈಸೆಲ್ಲಿಯುಂ ದೇವಿಯರ ಸುಳವಿಲ್ಲ ॥ ೨೩॥

ಎಂದು ನುಡಿಯಲ್ಕೇಳ ರಘುಪತಿ ।
ನೊಂದು ಹಮ್ಮೈಸಿದನು ಮನದೊಳ ।
ಗಿಂದುಮುಖಿ ನೀನಿಂತು ಮೋಸವಗೈವುದೇ ತನಗೆ ॥
ದಂದುಗಕ್ಕೆಡೆಗೈದು ನನ್ನನು ।
ಮಂದಭಾಗ್ಯನನೊರ್ವನನೆ ಬಿಡು ।
ತಿಂದು ನೀನಕಟೆತ್ತ ತೆರಳದೆ ಮುಂದೆ ಗತಿಯೇನು ॥ ೨೪ ॥

ಹಾ ತನೂದರಿ ಸೀತೆ ಭುವನ ।
ಖ್ಯಾತೆ ಜನಕಸುಜಾತೆ ಸುಗುಣೋ ।
ಪೇತೆ ಸಜ್ಜನಗೀತೆ ಮುನಿಸುಪ್ರೀತೆ ಘನದಯಿತೆ ॥
ಬೀತುದೆನ್ನಯ ಸಿರಿಯು ಭುವನ ।
ಖ್ಯಾತ ರಘುಕುಲಮುದ್ಧದಬುಧಿಯೊ ।
ಳಾತುಕೊಂಡೆನಕೀರ್ತಿಯನು ತಾನೆನುತ ಹಲುಬಿದನು ॥ ೨೫ ॥

ನೋಡಿದನು ಲಕ್ಷ್ಮಣನು ರಾಮನ ।
ನಾಡಮನುಜರಿಗುಚಿತವೆನಿಸುವ ।
ಗಾಢತರದಾಲಾಪಗಳ ನಿವನಡಗಿಸುವೆನೆನುತ ॥
ಬೇಡಿದನು ಕೈಮುಗಿದು ನಿನಗೀ ।
ಮಾಡು ತಕ್ಕುದೆ ದೇವ ದೇವಿಯು ।
ನಾಡೆ ಪುಡುಕುವವೇಳು ಸನಿಹದ ಗಿರಿಯು ಗುಹೆಗಳೊಳು ॥ ೨೬ ॥

ನರನು ನೀನಲ್ಲಸುರರಳಿವಿಗೆ ।
ಧರೆಯೊಳವತರಿಸಿರ್ಪ ಮಾಧವ ।
ನೊರೆಯಲೇನವನಿಜೆಯು ಸಾಕ್ಷಾಲ್ಲಕ್ಷ್ಮಿಯೆಂಬುದನು ॥
ಅರಿಯದನೆ ನೀಂ ನಿನಗಿದೇಕೀ ।
ಪರಿಬವಣೆ ಚಿತ್ತದಲಿ ಸಾಕೀ ।
ಳರಸ ದೇವಿಯನರಸಲೆಂದಲ್ಲಿಂದ ಪೊರಮಡಿಸೆ ॥೨೭॥

ದಾರಿಯಲ್ಲದದಾರಿಗೈದುತ ।
ಜೇರಿಯಂದದಿ ಜೇರಿ ಮತ್ಸಖಿ ।
ಬಾರ ಜಾನಕಿ ಹೃದಯನಾಯಿಕೆ ಬಾ ಸರೋಜಮುಖಿ ॥
ಧೀರೆ ಗುಣಮಣಿಹಾರೆ ರತ್ಯಾ ।
ಕಾರೆ ದುರಿತವಿದೂರೆ ರಾಮನ ।
ನೀರೆ ನೀನಿಂದೆತ್ತಲೈದಿದೆ ಮೊಗವ ತೋರೆನುತ ॥೨೮॥

ದಿಕ್ಕುತೋರದೆ ಕಣ್ಗಳೊಳು ನೀ ।
ರುಕ್ಕಿಬರೆ ರೋದನವನೆಸಗುತ ।
ಲಕ್ಕಜದ ನರರೂಪದಾಹರಿ ಹರವಸದೆ ಸೊರಗಿ ॥
ಪಕ್ಕಿಗಳ ಕೈವೀಸಿ ಕರೆಯುತ ।
ಸೊಕ್ಕುಜಾವನೆ ತನ್ನ ಮಡದಿಯ ।
ನಕ್ಕಟಾ ನೀಂಕಾಣಿರೇ ಎಂದೊಲಿದು ಬೆಸಗೊಂಡ ॥೨೯॥

ಹರಿಣಗಳ ಕೇಳಿದನು ತನ್ನಯ್ಯ ।
ಹರಿಣಲೋಚನೆಯೆತ್ತಲೆನ್ನುತ ।
ಕರಿಣಿಗಳ ಕಂಡರ್ಥಿಸಿದನಾಕರಿಗಮನೆಯಿರವ ॥
ಧರಣಿಯನು ಬೇಡಿದನು ತನಗಾ ।
ಧರಣಿಜೆಯ ತೋರೆನುತ ತಾಪಸಿ ।
ಯರನು ಕೇಳಿದನಾ ತಪಸ್ವಿನಿ ಯರ್ಪಳೆಲ್ಲೆನುತ ॥೩೦॥

ಧೈರ್ಯಗೆಟ್ಟುದು ಮನವು ಮೊದಲಿನ ।
ಕಾರ್ಯವೆಲ್ಲಡಗಿತ್ತೊ ಶಿವಶಿವ ।
ಶೌರ್ಯವೆಲ್ಲವು ಸಡಿಲಿತುತ್ಸವಮೆಲ್ಲಮಿಂಗಿದುದು ॥
ಸ್ಥೈರ್ಯಭುಜಬಲದರ್ಪಗಳು ನಿಜ ।
ಕಾರ್ಯಗಾಣದೆ ಬಣ್ಣಗೆಟ್ಟುವು ।
ಸೂರ್ಯವಂಶದ ನೃಪತಿಗರಸಿಯನಗಲಿದುದರಿಂದ ॥೩೧॥

ದೇವರಾಮಂಗಾಗಚೆಪ್ಪಾ ।
ಭಾವದಿಂ ಜಾನಕಿಯ ಮಾರ್ಗವ ।
ನಾವನಂಗಳ ಮೃಗಗಳೆಲ್ಲವು ತೋರಿಸುವುವೆನಲು ॥
ಮೇವನುಳಿಯುತ ಮುಂದೆ ನೆಗೆಯುತ ।
ತಾವು ತೆಂಕಣದಿಕ್ಕಿಗೋಡಿದು ।
ವೀವಿಶೇಷವ ಕಂಡು ರಘುವರರತ್ತ ನಡೆಯುತ್ತ ॥೩೨॥

ಕಂಡರೊಂದೆಡೆಯಲ್ಲಿ ಹೂವಿನ ।
ದಂಡೆಯಿಂದುದಿರಿರ್ದಪುಷ್ಪವ ।
ಖಂಡಿತದಿ ಜಾನಕಿಯ ಮಂಡೆಯೊಳಿರ್ದುದಹುದೆನುತ ।
ಕೊಂಡು ರಾಘುವನದನು ಚುಂಬಿಸಿ ।
ಪುಂಡರೀಕಾಂಬಕೆಯ ನಿಜದಿಂ ।
ಕಂಡನೋ ಎನೆ ಹರಿಸಗಡಲೊಳು ಮುಳುಗಿ ಮೈಮರೆದು॥ ೩೩॥

ಮತ್ತೆ ಚೇತರಿಸುತ್ತಲಿದಕೆ ನಿ ।
ಮಿತ್ತವೇನುಂಟಾಯ್ತು ತನ್ನಯ ।
ಮತ್ತಕಾಶಿನಿ ಮುಡಿದ ಸುಮವಿಂತೇಕೆ ಕೆದರಿದುದು ॥
ಉತ್ತಮಾಂಗದ ಮುಡಿಗದಾವನೊ ।
ಮಿತ್ತುರೂಹಿನದಾನವನು ಹಾ ।
ಯ್ದೆತ್ತಿಕೊಂಡರಸಿಯನು ಪೋಗಿರವೇಳ್ಕುಮೆಂದೆನುತೆ ॥ ೩೪॥

ಸುತ್ತಮುತ್ತಲು ನೋಡಿ ಹೇಸರ ।
ಗತ್ತೆಗಳು ಸತ್ತಿಹುದ ಕಂಡವ ।
ರೊತ್ತಿನಲಿ ಮುರಿದಿಳೆಯೊಳುರುಳಿದ ರಥವದೊಂದಿರಲು ॥
ಚಿತ್ತವಿಭ್ರಮವಾಂತು ಮುಂದೈ ।
ದುತ್ತ ತನ್ನಯ ನಾಮವನು ಜಪಿ ।
ಸುತ್ತ ಕೆಡೆದಿರ್ಪ ಜಟಾಯುವನಾಗ ನೋಡಿದನು ॥ ೩೫॥

ಪರಿದರೆಕ್ಕೆಯ ಸುರಿವರಕುತದ ।
ಗೊರಗೊರೆಂಬುತ್ಕ್ರಮಣನಿನದದ ।
ಕೊರಗಣೆಯ ಖಗಪತಿಯ ಮುಖದಿಂದರಿಯುತೆಲ್ಲವನು ॥
ದುರುಳರಾವಣನಿಂದ ತನ್ನಯ ।
ಹರಿಬಕೋಸುಗ ಕೆಡೆದನೆನ್ನುತ ।
ಮರುಗಿದನು ಸಂಸ್ಕರಿಸಿದನು ಮಡಿದಾ ಜಟಾಯುವನು ॥ ೩೬ ॥

ಪರರಿಗುಪಕಾರವನು ಮಾಳ್ಪವ ।
ನಿರಿಸುವನೆ ದೇಹಾಭಿಮಾನವ ।
ನರರೆ ತಂದೆ ಜಟಾಯು ತನಗಾಗಸುವನೀಗಿದೆಯ ॥
ಪರಮಪುಣ್ಯಶ್ಲೋಕ ನೀನಾ ।
ಪರಮಪದದೊಳ್ಸುಖದೆ ಬಾಳೆನು ।
ತರಸ ನುದಕಾಂಜಲಿಯ ನೀಯುತೆ ಮುಂದೆ ತೆರಳಿದನು ॥ ೩೭ ॥

ಬಿಡದೆ ತೆಂಕಣದೆಸೆಗೆ ನಡೆಯುತ ।
ಮೆಡಬಲಂಗಳೊಳಿರ್ಪ ಗಿರಿಗಳ ।
ಸಡರಿ ನೋಡುತ ವನವ ಸೋದಿಸಿ ಗುಹೆಗಳನು ಪೊಗುತ ॥
ತಡೆಯದಲ್ಲಲ್ಲರಸಿ ಸೀತೆಯ ।
ಕಡೆಗೆ ಕಾಣದೆ ದುಃಖಪರವಶ ।
ರಡಿಗಡಿಗೆ ಹಮ್ಮೈಸಿ ಬೀಳುತಲೊಡನೆ ಯೇಳುತಲಿ ॥ ೩೮ ॥

ಇಂತು ಕಂಗೆಟ್ಟಡವಿಯಲಿ ಬಲು ।
ಚಿಂತೆಗಂಗವನಿತ್ತು ತೆರಳುತ ।
ಕಂತುಪೀಡಿತೆಯಾದಯೋಮುಖಿಯೆಂಬ ದನುಜೆಯನು ॥
ಪಿಂತೆ ತಾವಾ ಶೂರ್ಪಣಖೆಗಿರ ।
ದೆಂತು ಗೈದರೊ ತದ್ವಿಧಾನದ ।
ಸಂತವಣೆಗಿವಳರ್ಹೆಯೆನ್ನುತ ಭಂಗಿಸಿದರವಳ ॥೩೯॥

ದಾರಿಯೇ ನೆರೆಕಾಣಬಾರದ ।
ಘೋರಕಾನನದೊಳಗೆ ಬರುತಿರ ।
ಲಾರುಬಟೆಯೊಂದಾಗ ಕೇಳಿಸಿತತಿಭಯಂಕರದ ॥
ಭೂರಿಸೂಕರಹರಿಗಜಂಗಳು ।
ಚೀರಿಡುತ ದೆಸೆಗೆಟ್ಟು ಹಾರಿದು ।
ವೀರಭಸಕಿಂದೇನುಕಾರಣವರಿಯಬೇಕೆನುತ ॥೪೦॥

ಸುತ್ತಲೀಕ್ಷಿಸುತುಭಯದಿಶೆಯಿಂ ।
ದೊತ್ತಿ ಬರ್ಪುವು ಗಿರಿಯಸೊಲ್ಗಳ ।
ವೆತ್ತಣದ್ಭುತ ಸಿಲುಕಿಸಿದುವಿಂದೆಮ್ಮನಿರುಬಿನಲಿ ॥
ನಿತ್ತರಿಪಹದನಾವುದೆನ್ನುತ ।
ಚಿತ್ತದಲಿ ಸಂಭ್ರಾಂತರಾಗುತ ।
ಮತ್ತೆ ನೋಡುತ್ತರಿದರಸುರನ ತೋಳ್ಗಳೆಂದೆನುತ ॥೪೧॥

ಸಿರವದಿರ್ದುದು ಬಸಿರಮಧ್ಯದೆ ।
ಚರಣವಿಲ್ಲದ ಬರಿಯ ಮುಂಡವು ।
ಕರಗಳವು ತಾವೆರಡುಯೋಜನದುದ್ದವಳತೆಯಲಿ ॥
ಉರಿವನೇತ್ರವದೊಂದು ಪಣೆಯೊಳ ।
ಗಿರಲು ಪಸರಿಸಿದುಭಯಕರಗಳ ।
ಸೆರೆಗೆ ಸಿಕ್ಕಿದವನವ್ಯಗಂಗಳ ತಿಂದು ತೇಗುತಲಿ ॥೪೨॥

ಅದುಭುತಾಕಾರದಲಿ ಗಿರಿಯವೊ ।
ಲಿದಿರೊಳಿರುವನ ಕಂಡಿದೇನಿಂ ।
ದಿದಕುಪಾಯವು ಕೊಂದೊಡಲ್ಲದೆ ಬಾಳ್ವತವಗಿಲ್ಲ ॥
ಸದೆದು ಕಳೆ ನೀನೊಂದುಬಾಹುವ ।
ನಿದೆಕೊ ನಾಂ ಮತ್ತೊಂದ ಕಡಿವೆನು
ಬೆದರಲಾಗದೆನುತ್ತೆ ರಾಘುವನೊರೆದನನುಜಂಗೆ ॥೪೩॥

ಭರದೊಳಾಗಳೆ ವೀರರಿರ್ವರು ।
ಶರಗಳಿಂದವನೆರಡುತೋಳ್ಗಳ ।
ನರಿಯಲಾತಂಗರಿವು ಬಂದುದು ಕಂಡನಾಹರಿಯ ॥
ಗುರುವೆ ತವದರ್ಶನದೊಳೆನ್ನಯ ।
ದುರಿತರಾಶಿಯು ಕರಗಿ ಪೋದ ।
ತ್ತರರೆದಾನವಜನ್ಮದುಃಖವುಕಳೆದುದಿಂದಿನಲಿ ॥೪೪॥

ಅರಿಯಲಾನು ಕಬಂಧನೆಂಬವ ।
ನಿರವು ತನಗೀವಿಪಿನಮಧ್ಯದೆ ।
ದೊರೆದುದೀದನುಜತ್ವವೊರ್ವ ತಪೋಧನನುಶಪಿಸೆ ॥
ಪರಿಹೃತಿಯ ಯಾಚಿಸಲು ಲಕ್ಷ್ಮೀ ।
ವರನು ನರನಾಗುದಿಸಿ ನಿನ್ನೀ ।
ಕರವನರಿಯೆ ವಿಶಾಪವಹುದೆನುತವನು ಬೆಸಸಿದನು ॥೪೫॥

ಎಂದಿಗಪ್ಪುದೊ ನಿನ್ನ ಪದಗಳ ।
ಸಂದರುಶನದ ಭಾಗ್ಯವೆಂದರ ।
ವಿಂದನಾಭನೆ ಸಮಯವೀಕ್ಷಿಸುತಿಂದು ಧನ್ಯತೆಯ ॥
ಹೊಂದಿದೆನು ನಿನ್ನಯ ಕರಂಗಳ ।
ನಿಂಧನವನುರಿಗೊಳಿಸಿ ಪಾಪಿಕ ।
ಬಂಧದೇಹವ ದಹಿಸಿದೊಡೆ ಲೇಸಹದು ನಿನಗೆನಲು ॥೪೬॥

ಬಡನೆ ಸಹಭವರಿಂಧನಂಗಳ ।
ಕಡಿದು ಜೋಡಿಸುತಸುರದೇಹವ ।
ನಿಡುತನುಗ್ನಿಯೊಳುರಿಸಲದರಿಂದೆಳ್ದು ಗಗನದಲಿ ॥
ಕಡುಚೆಲುವ ಗಂಧರ್ವನೊಪ್ಪುತ ।
ನುಡಿಸಿವನು ಸಿರಿಯೆರೆಯ ನಿನ್ನಯ ।
ಮಡದಿಮಣಿಯನು ಕಾಂಬುಪಾಯುವ ಪೇಳ್ವೆನವಧರಿಸು ॥೪೭॥

ಅರಸರಿಗೆ ಷಡ್ಗುಣಗಳೇ ತಾ ।
ವರಿಯೆ ಕಾರ್ಯಕೆ ಸಾಧನಂಗಳು ।
ಪಿರಿಯಕಷ್ಟದೊಳೊದವಿದಾತನೆ ತಿಳಿಯಲುಪಕಾರಿ ॥
ನಿರುತ ನಿನ್ನಾಪತ್ತಿಗೆಣೆಯಾ ।
ದುರುವಿಪತ್ತನು ಹೊಂದಿ ಕೊರಗುವ ।
ಖರಕರಾತ್ಮಜನೆನಿಪ ಸುಗ್ರೀವಾಖ್ಯ ಕಪಿವರನು ॥೪೮॥

ವರಪರಾಕ್ರಮಿಯೆನಿಸಿ ಸೊಕ್ಕಿದ ।
ಹಿರಿಯಸೋದರನಪ್ಪ ವಾಲಿಯು ।
ಕರದೊಳಪಜಯವೊಂದಿ ನಾಲ್ವರು ಮಂತ್ರಿವರರೊಡನೆ ॥
ಇರುವನಾವರಋಶ್ಯಮೂಕದ ।
ಗಿರಿಯೊಳವನನು ಸೇರಿ ಸಖ್ಯವ ।
ನುರುವಿವೇಕದೆ ಬೆಳಸಲಪ್ಪುದು ಕಾರ್ಯವತಿಜವದೆ ॥೪೯॥

ಕಲಹವಾಗಲು ಸೋದರನ ನಿಜ ।
ಲಲನೆ ರುಮೆಯೆಂಬಳನು ಬಲುಹಿಂ ।
ದಲಘುಭುಜಬಲನಿಂದ್ರತನುಜನು ವಾಲಿಯುಪಹರಿಸಿ ॥
ನಿಲಯದಿಂ ಪೊರಮಡಿಸಿ ತಮ್ಮನ ।
ನೆಳಲ ಸೈಸದೆ ಕಾಡಿಗಟ್ಟ ।
ಲ್ಕಲೆಯುತಿರ್ಪನು ಸತಿಯ ವಿರಹದೊಳವನು ಕಂಗೆಡುತ ॥೫೦॥

ದೊರೆವುದಾತನ ಮೈತ್ರಿ ದಿಟದಲಿ ।
ತೆರಳು ಪಶ್ಚಿಮದಿಕ್ಕಿಗೀಗಳೆ ।
ಮೆರೆವ ಪಂಪಾಸರದ ತೀರದ ಪುಣ್ಯವನಗಳಲಿ ॥
ಪರಿಪರಿಯ ಫಲಪುಷ್ಪವಿರ್ಪುವು ।
ಹರಿಣನೆಕ್ಕಲನಾದಿಯಿಹ ಮಿಗಗಳು ।
ಮಿರುವುವಲ್ಲಿಗೆ ಕೆಲವುಕಾಲವ ಕಳೆಯಲನುಕೂಲ ॥೪೧॥

ಅದರಪಡುವಣ ತಡಿಯ ಸೇರಲು ।
ಸದಮಲಾಶ್ರಮವೊಂದು ಮನಕುರೆ ।
ಮುದವ ಬೀರುತ ಗೋಚರಿಪುದಲ್ಲೊರ್ವ ತಾಪಸಿಯು ॥
ಪದುಮನಾಭನೆ ಶಬರಿಯೆಂಬವ ।
ಳಿದಿರುನೋಡುತ ನಿನ್ನ ಚರಣವ ।
ಪದುಳದಿಂ ಸೇವಿಸುವುದಕೆ ಕಾದಿಹಳು ಪೋಗಲ್ಲಿ ॥೪೨॥

ಎನುತ ನುಡಿಯುವ ವರಕಬಂಧನ ।
ವಿನಯದುಕ್ತಿಗೆ ಮೆಚ್ಚಿ ರಾಮನು ।
ಘನಮಹಿಮ ನೀನಿನ್ನು ನಿನ್ನಯ ಲೋಕಕ್ಕೈದೆನುತ ॥
ಅನುಜನೊಡನಲ್ಲಿಂದ ಪೊರಮ ।
ಟ್ಟನು ನಯಾನ್ವಿತೆಯಾದ ಶಬರಿಯ ।
ವಿನುತಮಾದಾಶ್ರಮವ ನರಸುತಮಲ್ಲಿಗೈತಂದ ॥೪೩॥

ಸಡಗರದೊಳಾಘನವಿರಕ್ತಿಯು ।
ಮುಡಿಯುಚಾಚುತೆ ರಾಮನಂಘ್ರಿಗೆ ।
ಕಡುದರಿದ್ರಗೆ ನಿಧಿಯುದೊರೆದಂತಾಗಳೊಲವಿನಲಿ ॥
ತಡೆಯುದರ್ಘ್ಯಾರ್ಘ್ಯಾದಿಗಳನೀಯುತ ।
ಅಡಿಗಡಿಗೆ ಕೀರ್ತಿಸುತೆ ಕುಣಿಯುತ ।
ಲೊಡನೆ ಫಲಮೂಲಾದಿಗಳ ನಿತ್ತಾಗಳುಪಚರಿಸೆ ॥೫೪॥

ರಾಮನಾತಿಥ್ಯವನು ಕೈಕೊಂ ।
ಡಾಮಹಾವ್ರತೆಗಿರ್ಪ ಭಕ್ತಿಗ ।
ಮಾಮಹಿತ ವೈರಾಗ್ಯಕಂ ಮೆಚ್ಚುತ್ತ ತಲೆದೂಗಿ ॥
ನೇಮವಿತ್ತನು ನಿನಗೆ ನೀನಿ ।
ಸ್ಸಾಮಹೇಂದ್ರನ ಲೋಕವನು ಮೇಣ್ ।
ಕಾಮಿಸುವ ಲೋಕಾಂತರವನಿರದೊಂದಿ ಸುಖದೊಳಿರು ॥೫೫॥

ಎಂದು ನುಡಿಯುಲ್ಕೊಡನೆ ವೃದ್ಧೆಯು ।
ವಂದಿಸುತ ರಘುವರನ ಪದಗಳಿ ।
ಗಂದು ಯಜ್ಞೇಶ್ವರನಿಗಾಹುತಿಯಿತ್ತು ನಿಜತನುವ ॥
ಹಿಂದೆ ತನ್ನಯ ಗುರುಮತಂಗನು ।
ಹೊಂದಿದಾವರಪುಣ್ಯಲೋಕಕೆ ।
ಸಂದು ಸುರುಚಿರಸುಖದೊಳೆಸೆದಳು ಶಬರಿ ಗುಣಲಹರಿ ॥೫೬॥

ಬಳಿಕಲಾ ಮಾತಂಗವನವನು ।
ಕಳೆದು ಮುಂದಿಹ ಗಿರಿಯ ಕಾಣುತ ।
ವಲಿಮುಖೇಂದ್ರನ ಕಾಣುವೆವು ತಾವೆಂಬ ಸಡಗರದಿ ॥
ಲಲಿತಹರ್ಷವನಾಂತು ಭಾಸ್ಕರ ।
ಕುಲಜರೈದುತ ಕೆಲದೊಳೆಸೆವಾ ।
ತಿಲಕಪಾಟಲಿ ಪನಸನಾರಂಗಾದಿ ತರುಗಳೊಳು ॥೫೭॥

ನೆರೆದು ಕುಳಿತಿಹ ಶುಕಪಿಕಂಗಳ ।
ನೆರವಿಯಿಂದೈತಪ್ಪ ಮೃದುಲ ।
ಸ್ವರವನಾಲಿಸುತತಿಮನೋಹರವಾಗಿ ರಂಜಿಸುವ ।
ಗೊರಟೆ ಸಂಪಗೆಯಾದಿ ಯಾದಾ ।
ತರುಗಳಿಗೆ ಪರ್ಬಿಪ್ಪವನಲತೆ ।
ಭರದೆ ಕುಸುಮಿತವಾಗಿ ಮೊರೆದಿರಲದರ ಮಧ್ಯದಲಿ ॥೫೮॥

ವನಸುಮಂಗಳಮೇಲೆ ಬೀಸು ।
ತ್ತನಿಲನುರೆ ತನಿಗಂಪನಾನುತ ।
ತನುವಿಗಾಪ್ಯಾಯನವ ಮಾಳ್ಪುದ ಕಂಡು ರಘುವರರು ॥
ವಿನುತಚೈತ್ರನ ಮಹಿಮೆಗಿರದುರೆ ।
ಮನದೊಳಾನಂದಿಸುತ ಕಪಿಕುಲ ।
ವನಧಿಚಂದ್ರನ ಕಾಂಬ ತವಕದೊಳೈದಿದರು ಮುಂದೆ ॥೫೯॥

ಅರಣ್ಯಕಾಂಡಂ ಸಂಪೂರ್ಣಂ.

